



# ಹೊಂಗನಸು



ಬಿ.ಎಂ.ಶ್ರೀ ಪ್ರತಿಷ್ಠಾನದ ವಾರ್ತಾಪತ್ರಿ

ಹೊಂಗನಸು – 81

ಸಂಪುಟ: ೧೦ ಸಂಚಿಕೆ: ೦೪ Vol. 10 Issue: 04 | ಜುಲೈ ೨೦೨೨ July 2022 | ಪುಟಗಳು ೮ Pages - 8 | ವಾರ್ಷಿಕ ಚಂದಾ ರೂ. ೨೦/- | ಸಂಪಾದಕರು : ಶ್ರೀ ಬಿ. ಆರ್. ರವೀಂದ್ರನಾಥ್ Editor : Sri. B.R. Ravindranath


ಶ್ರೀ ಶಕ ೧೯೪೪ ಶುಭಕೃತ ನಾಮ ಸಂವತ್ಸರ ಉತ್ತರಾಯಣಾಯ– ದಕ್ಷಿಣಾಯಣ–ಗೀಷ್ಮ ವರ್ಷ ಋತು ಚಾಂದ್ರಮಾನ ಆಷಾಡ–ಶ್ರಾವಣ ಮಾಸ ಸೌರಮಾನ ಮಿಥುನ–ಕಟಕ

೦೨.೦೬.೨೦೨೨

## ಶ್ರೀಮತಿ ಜಯಲಕ್ಷ್ಮಮ್ಮ ಬಾಪು ರಾಮಣ್ಣ ದತ್ತಿ ಕಾರ್ಯಕ್ರಮ

**ಉಪನ್ಯಾಸ : ಡಾ. ಕೂಡ್ಲೂರು ವೆಂಕಟಪ್ಪ**

**ವಿಷಯ : ರಾಘವಾಂಕನ ಹರಿಶ್ಚಂದ್ರ ಕಾವ್ಯದಲ್ಲಿ 'ಚಂದ್ರಮತಿಯ ಪ್ರಲಾಪ' ಪ್ರಸಂಗ**




ಪ್ರಾರಂಭದಲ್ಲಿ ಡಾ. ಶಾಂತರಾಜು ಅವರು ಪ್ರತಿಷ್ಠಾನವು ಕಳೆದ ಎಂಟು ವರ್ಷಗಳಿಂದಲೂ ಮೇಲಿನ ದತ್ತಿನಿಧಿಯಡಿಯಲ್ಲಿ ಕಾರ್ಯಕ್ರಮಗಳನ್ನು ಆಯೋಜಿಸುತ್ತಿರುವ ವಿಷಯವನ್ನು ತಿಳಿಸಿ, ಕಾರ್ಯಕ್ರಮಕ್ಕೆ ಉಪನ್ಯಾಸಕರನ್ನು ಮತ್ತು ದತ್ತಿ ನಿಧಿಯ ಕುಟುಂಬವರ್ಗದವರನ್ನು ಸ್ವಾಗತಿಸಿ, ಸಭೆಗೆ ಡಾ. ಕೂಡ್ಲೂರು ವೆಂಕಟಪ್ಪ ಅವರ ಸಂಕ್ಷಿಪ್ತ ಪರಿಚಯ ಮಾಡಿಕೊಟ್ಟರು.

ಬಾಪು ರಾಮಣ್ಣ ಅವರು ಬಿ.ಎಂ.ಶ್ರೀ.ಯವರ ಆಪ್ತ ಶಿಷ್ಯರಲ್ಲೊಬ್ಬರಾಗಿದ್ದು, 'ಅಶ್ವತ್ಥಾಮನ್' ನಾಟಕದಲ್ಲಿ ಮುಖ್ಯಪಾತ್ರ ವಹಿಸುತ್ತಿದ್ದರು. ಬಿ.ಎಂ.ಶ್ರೀ. ಅವರ ಇಂಗ್ಲಿಷ್ ಗೀತೆಗಳಿಗೆ ರಾಗ ಸಂಯೋಜನೆಯನ್ನೂ ಮಾಡುತ್ತಿದ್ದರು. ಅವರ ಪುಣ್ಯ ಸ್ಮರಣಾರ್ಥ, ಬಾಪು ರಾಮಣ್ಣ ಅವರ ಮಕ್ಕಳಾದ ಬಾಪು ಸತ್ಯನಾರಾಯಣ, ಬಾಪು ಸೋಮಶೇಖರ ಮತ್ತು ಶ್ರೀಮತಿ ಎಚ್.ಆರ್. ಲೀಲಾವತಿಯವರು ೨೦೧೫ರಲ್ಲಿ ದತ್ತಿನಿಧಿ ಸ್ಥಾಪಿಸಿರುತ್ತಾರೆ. ಈ ದಿನ ಅವರ ಸುಪುತ್ರಿ ಮತ್ತು ಹೆಸರಾಂತ ಸಂಗೀತ ಕಲಾವಿದರಾದ ಶ್ರೀಮತಿ ಎಚ್.ಆರ್. ಲೀಲಾವತಿಯವರು ಕಾರ್ಯಕ್ರಮದಲ್ಲಿ ಪಾಲ್ಗೊಂಡಿದ್ದಾರೆ. ದತ್ತಿದಾನಿಗಳ ಆಶಯದಂತೆ ಪ್ರತಿಷ್ಠಾನವು ಕಾರ್ಯಕ್ರಮಗಳನ್ನು ನಡೆಸಲಾಗುತ್ತಿದೆ ಎಂದೂ ಡಾ. ಬೈರಮಂಗಲ ರಾಮೇಗೌಡ ಅವರು ಪ್ರಾಸ್ತಾವಿಕ ನುಡಿಗಳನ್ನಾಡುತ್ತಾ ತಿಳಿಸಿದರು. ಕೊನೆ ಗಳಿಗೆಯಲ್ಲಿ ಉಪನ್ಯಾಸವನ್ನು ಏರ್ಪಡಿಸಿದ್ದಾಗ್ಯೂ, ಬೇಸರಿಸದೆ ನಮ್ಮೊಂದಿಗೆ ಸಹಕರಿಸಿದ ಡಾ. ಕೂಡ್ಲೂರು ವೆಂಕಟಪ್ಪನವರ ಬಗೆಗೆ ಮೆಚ್ಚಿಗೆಯ ಮಾತುಗಳನ್ನು ಆಡಲಾಯಿತು.

ಉಪನ್ಯಾಸದ ಪ್ರಾರಂಭದಲ್ಲಿ ರಾಘವಾಂಕನ ಕಾಲಮಾನದ ಕ್ರಿ.ಶ. ಬಗೆಗೆ ಮತ್ತು ಅವನ ಇನ್ನಿತರ ಕೃತಿಗಳ ಬಗ್ಗೆ ಪ್ರಸ್ತಾಪಿಸಿ, ರಾಘವಾಂಕನು ವಿಪುಲವಾಗಿ ಷಟ್ಪದಿಗಳನ್ನು ಪ್ರಯೋಗಿಸಿದ ನಡುಗನ್ನಡದ ಕವಿ, ಪಾಮರರ ಬಳಿಗೂ ಕಾವ್ಯ ತಲುಪಬೇಕೆಂಬ ಹೆಬ್ಬಯಕೆಯನ್ನು ರಾಘವಾಂಕನು ಹೊಂದಿದ್ದನು, ಹರಿಶ್ಚಂದ್ರ ಕಾವ್ಯವು ವಾರ್ಧಕ ಷಟ್ಪದಿಯ ಚಿರಸ್ಥಾಯಿ ಕಾವ್ಯವೆನಿಸಿ ಇನ್ನಿತರ ಪ್ರಸಿದ್ಧ ಕನ್ನಡ ಕವಿಗಳಿಗೆ ಛಂದೋಮಾರ್ಗ ದರ್ಶನವಾಗಿ ಪರಿಣಿಮಿಸಿದ ಕೃತಿಯೆನಿಸಿತು. ಅಂದಿಗೂ ಇಂದಿಗೂ ಇದೊಂದು ಜನಾದರಣೀಯವಾದ ಕೃತಿಯಾಗಿದ್ದು, ಇದರಲ್ಲಿ ೧೪ ಸ್ಥಲಗಳಿವೆ, 'ಹರನೆಂಬುದೇ ಸತ್ಯ, ಸತ್ಯವೆಂಬುದೇ ಹರನು' ಇದು ಈ ಕಾವ್ಯದ ಶ್ರುತಿವಾಕ್ಯವಾಗಿದ್ದು ಇಂದಿಗೂ ಯಾರೂ ರಾಘವಾಂಕನನ್ನು ಮರೆಯುವಂತಿಲ್ಲ ವಾಗ್ವಾದ ಸಂವಾದ ರೂಪದ ಸಂಭಾಷಣೆಗಳು ಕಾವ್ಯಕ್ಕೆ ಮೆರಗನ್ನು ನೀಡಿವೆ ಎಂದು ಹೇಳಿ ಕಾವ್ಯದ ಕೆಲವು ಪದ್ಯಗಳನ್ನು ವಾಚಿಸಿ, ಉಪನ್ಯಾಸಕ್ಕೆ ಮೆರಗನ್ನು ನೀಡಿದರು. ನವರಸಗಳಲ್ಲಿ ಒಂದಾದ 'ಶಾಂತರಸ'ಕ್ಕೆ ಹರಿಶ್ಚಂದ್ರ ಕಾವ್ಯವು ಒಂದು ಉತ್ತಮ ಉದಾಹರಣೆಯೆಂಬ ಅಭಿಪ್ರಾಯವು ಅವರಿಂದ ವ್ಯಕ್ತವಾಯಿತು.

ಶ್ರೀ ಬಿ.ಎಸ್. ಗುರುಪ್ರಸಾದ್ ಅವರ ವಂದನಾರ್ಪಣೆಯೊಂದಿಗೆ ಕಾರ್ಯಕ್ರಮ ಸಂಪನ್ನಗೊಂಡಿತು.


ದಿ|| ಪ್ರೊ ಎಂ.ವಿ. ಸೀತಾರಾಮಯ್ಯ
ಸಂಸ್ಥಾಪಕರು

ನಾಡೋಜ ಪ್ರೊ. ಎಂ. ಎಚ್. ಕೃಷ್ಣಯ್ಯ
ಗೌರವಾಧ್ಯಕ್ಷರು
ಮೊ : ೯೪೫೬೫೮೮೮೫

**ಪದಾಧಿಕಾರಿಗಳು**

ಅಧ್ಯಕ್ಷರು
ಡಾ. ಬೈರಮಂಗಲ ರಾಮೇಗೌಡ
ಮೊ : ೯೩೪೧೨೫೮೧೪೨

ಗೌ|| ಕಾರ್ಯದರ್ಶಿ
ಡಾ. ಶಾಂತರಾಜು
ಮೊ : ೯೮೦೪೮೧೪೮೪

ಗೌ|| ಕೋಶಾಧಿಕಾರಿ
ಡಾ|| ಎಸ್. ಅನಿಲ್‌ಕುಮಾರ್
ಮೊ : ೯೬೪೪೬೫೯೫೬

ಸಂಪಾದಕರು
ಶ್ರೀ. ಬಿ.ಆರ್. ರವೀಂದ್ರನಾಥ್
ಮೊ : ೯೪೪೮೩೬೬೮೯

ಹಸ್ತಪ್ರತಿ ಸಂಯೋಜನಾಧಿಕಾರಿ
ಶ್ರೀ ಬಿ.ಎಸ್. ಗುರುಪ್ರಸಾದ್
ಮೊ : ೯೫೩೫೯೭೩೩೭

ಸಂಶೋಧನ ಕೇಂದ್ರದ ಸಂಯೋಜನಾಧಿಕಾರಿ
ಡಾ. ಚಿತ್ತಯ್ಯ ಪೂಜಾರ್
ಮೊ : ೯೮೪೫೬೩೭೨೪೭


**ಚಂದಾ ವಿವರಗಳು**
ವಾರ್ಷಿಕ ಚಂದಾ : ರೂ. ೨೦/-
ಐದು ವರ್ಷಗಳ ಚಂದಾ : ರೂ. ೧೦೦/-


ಬಿ.ಎಂ.ಶ್ರೀ. ಪ್ರತಿಷ್ಠಾನ
ಸ್ಥಾಪನೆ : ೦೬-೦೫-೧೯೭೯
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಪ್ರತಿಷ್ಠಾನದ ರಸ್ತೆ
೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು – ೧೯
ಮೊಬೈಲ್ : ೯೭೨೮೧೨೧೨೭
ಇಮೇಲ್ : bmsritrust@gmail.com
web: www.bmshri.org
ಕಛೇರಿ ಸಮಯ:
ಬೆಳಗ್ಗೆ 10–30ರಿಂದ ಸಂಜೆ 5–30ಗಂಟೆ.
ವಾರದ ರಜಾದಿನ : ಮಂಗಳವಾರ

ಸಂಪಾದಕೀಯ

೨೦೨೨ನೇ ಇಸವಿಯ ಮೊದಲ ಆರು ತಿಂಗಳುಗಳು ಕಳೆದಿವೆ. ವರ್ಷದ ಆರಂಭದಲ್ಲಿ ಈ ಸಾಲಿನಲ್ಲಿ ಸಾಧಿಸಬೇಕೆಂಬ ಗುರಿಗಳ ಗತಿ ಏನಾಗಿವೆ ಎಂದು ಪರಿಶೀಲಿಸಬೇಕಾದ ಕಾಲಘಟ್ಟ. ನಾಳೆ ಎಂಬುದು ಬಹಳ ಬೇಗನೆ ಬರುತ್ತದೆ ಎಂದು ವಿಜ್ಞಾನಿಯೊಬ್ಬರು ಹೇಳಿದ್ದಾರೆ. ಇದುವರೆಗೆ ಕೊರೋನಾ ಮುಕ್ತ ಜೀವನದ ಸವಿಯನ್ನು ಅನುಭವಿಸುತ್ತಿರುವ ನಾವು ಈಗ ಸಾಧಿಸುತ್ತಿರುವುದು ಏನು ಎಂದು ಪ್ರಶ್ನಿಸಿಕೊಳ್ಳುವ ಸದವಕಾಶ.

ದೇಶದಲ್ಲಿ ಈಗಾಗಲೇ ಇರುವ ಸಮಸ್ಯೆಗಳು ಸಾಲದೆಂಬಂತೆ ಹಲವಾರು ಹೊಸ ಹೊಸ ಕಾರಣಗಳಿಗೆ ಅಶಾಂತಿ ಉಂಟಾಗಿರುವುದು ನಮಗೆಲ್ಲ ತಿಳಿದ ವಿಷಯವೇ. ಹಣದುಬ್ಬರ ಹೆಚ್ಚಾಗಿ ದೈನಂದಿನ ಬದುಕಿಗೆ ಬೇಕಾಗುವ ಎಲ್ಲ ವಸ್ತುಗಳು ಹಾಗೂ ಸೇವೆಗಳು ದುಬಾರಿಯಾಗುತ್ತಿವೆ. ಮುದ್ರಣ ಕಾಗದವೂ ತುಟ್ಟಿಯಾಗಿದೆ. ರಷ್ಯಾ ಮತ್ತು ಉಕ್ರೇನ್ ನಡುವಿನ ಯುದ್ಧ ಅಂತ್ಯ ಕಾಣುವ ಚಿಹ್ನೆಗಳೂ ಸಹ ಕಾಣುತ್ತಿಲ್ಲ.

ಇಂತಹ ಪರಿಸ್ಥಿತಿಯಲ್ಲಿ ಲೇಖಕರಿಗೆ ತಾವು ಕೃತಿಗಳನ್ನು ರಚಿಸಬೇಕೆ ಎಂಬ ಸಂದೇಹ ಉಂಟಾಗಿದ್ದರೆ ಆಶ್ಚರ್ಯವಿಲ್ಲ. ಆದರೆ ಈ ಕಾಲದಲ್ಲಿ ನಡೆಯುತ್ತಿರುವ ವಿದ್ಯಮಾನಗಳು ಸೃಜನಾತ್ಮಕ ಬರಹಗಾರರಿಗೆ ವಿವಿಧ ರೀತಿಯ ವಿಷಯಗಳ ಬಗ್ಗೆ ಕೃತಿಗಳನ್ನು ರಚಿಸಲು ವಿಪುಲವಾದ ಅವಕಾಶವನ್ನು ಒದಗಿಸಿರುವುದಂತೂ ನಿಜ.

– ಬಿ.ಆರ್. ರವೀಂದ್ರನಾಥ್

# ಪ್ರಕಟಣೆ

## ಎಲ್ಲ ಪುಸ್ತಕಾಸಕ್ತರ ಗಮನಕ್ಕೆ

ಬಿ.ಎಂ.ಶ್ರೀ. ಪ್ರತಿಷ್ಠಾನದ ಗ್ರಂಥಾಲಯ ವಿಭಾಗವು ತನ್ನಲ್ಲಿರುವ ಹೆಚ್ಚುವರಿ ಪುಸ್ತಕಗಳನ್ನು, (ಹೆಚ್ಚುವರಿ ಪ್ರತಿಗಳು ಮತ್ತು ಇತರರು ನೀಡಿರುವ ಪುಸ್ತಕಗಳು.) **'ಪುಸ್ತಕ ಸಂತೆ'** ಮೂಲಕ ಪುಸ್ತಕ ಪ್ರಿಯರಿಗೆ, ಸಾಹಿತ್ಯಾಸಕ್ತರಿಗೆ ವಿಲೇವಾರಿ ಮಾಡುವ ನಿರ್ಧಾರ ಕೈಗೊಂಡಿದೆ. ಅದರಂತೆ ೧೦-೦೭-೨೦೨೨ರಂದು ಭಾನುವಾರ ಬೆಳಗ್ಗೆ ೧೧-೩೦ ಗಂಟೆಯಿಂದ ಅಪರಾಹ್ನ : ೩-೦೦ವರೆಗೆ ಪುಸ್ತಕ ಸಂತೆಯಲ್ಲಿರುವ ಪುಸ್ತಕಗಳನ್ನು ಪುಸ್ತಕ ಮಾರಾಟಗಾರರಲ್ಲದ ಆಸಕ್ತರು ತೆಗೆದು-ಕೊಂಡು ಹೋಗಬಹುದು. ಪುಸ್ತಕ ಪ್ರೀತಿ ಇರುವವರಿಗೆ ಪುಸ್ತಕಗಳನ್ನು ಉಚಿತವಾಗಿ ನೀಡಲಾಗುತ್ತದೆ. ಭಾಗವಹಿಸಿ, ಪುಸ್ತಕ ಸಂತೆಯನ್ನು ಯಶಸ್ವಿಗೊಳಿಸಿ.

ಪುಸ್ತಕ ಕಿರುವಿಮರ್ಶೆ

**ಕೈಗಾರಿಕಾ ಅರ್ಥಶಾಸ್ತ್ರ:** ಲೇ: ಡಾ. ಎಚ್. ಆರ್. ಕೃಷ್ಣಯ್ಯಗೌಡ, ಪ್ರ: ಸ್ಪಂದನ ಪ್ರಕಾಶನ, ೧೫೬, ೧೨ನೇ ಕ್ರಾಸ್, ಲಲಿತಮಹಲ್ ನಗರ, ಆವಲಹಳ್ಳಿ ಬಡಾವಣೆ, ಮೈಸೂರು-೫೭೦೦೧೧, ಪುಟಗಳು: ೩೯೨, ಬೆಲೆ: ರೂ. ೨೪೦, ೨೦೧೭.

ಪ್ರಸ್ತುತ ಪುಸ್ತಕವು ಕರ್ನಾಟಕ ರಾಜ್ಯದ ಎಲ್ಲಾ ವಿಶ್ವವಿದ್ಯಾನಿಲಯಗಳ ಎಂ.ಎ. ಮತ್ತು ಬಿ.ಎ. ತರಗತಿಗಳಿಗಾಗಿ ಹಾಗೂ ಸಂಶೋಧಕರಿಗಾಗಿ, ಉನ್ನತ ವ್ಯಾಸಂಗದವರಿಗಾಗಿ ಮತ್ತು ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ತಯಾರಾಗುವವರಿಗಾಗಿ ರಚಿಸಲಾಗಿದೆ. ನುರಿತ ಲೇಖಕರಾದ ಡಾ. ಎಚ್. ಆರ್. ಕೃಷ್ಣಯ್ಯಗೌಡರು ಅರ್ಥಶಾಸ್ತ್ರ ಲೇಖಕರಾಗಿ ಅಭಿವೃದ್ಧಿ ಅರ್ಥಶಾಸ್ತ್ರ, ಪರಿಸರ ಅರ್ಥಶಾಸ್ತ್ರ, ಗ್ರಾಮೀಣ ಅರ್ಥಶಾಸ್ತ್ರ ಮತ್ತು ಸಹಕಾರ ವಿಷಯಗಳಲ್ಲಿ ವಿಶೇಷ ಅಧ್ಯಯನ ಮಾಡಿದ್ದಾರೆ.

ಕೈಗಾರಿಕಾ ಅರ್ಥಶಾಸ್ತ್ರದ ಪರಿಚಯ, ಉದ್ಯಮ ಸಂಸ್ಥೆಯ ಸಿದ್ಧಾಂತ, ಕೈಗಾರಿಕಾ ಸಂರಚನೆ, ಕೈಗಾರಿಕಾ ಉತ್ಪಾದಕತೆ ಮತ್ತು ದಕ್ಷತೆ, ಕೈಗಾರಿಕಾ ಕಾರ್ಮಿಕರು, ಕೈಗಾರಿಕಾ ಹಣಕಾಸು, ಮಾರುಕಟ್ಟೆ ವರ್ತನೆ ಮತ್ತು ಭಾರತದ ಕೈಗಾರಿಕಾ ಆರ್ಥಿಕತೆ, ಕೈಗಾರಿಕೀಕರಣ ಮತ್ತು ಪರಿಸರ ಕುಸಿತ –ಇಷ್ಟು ವಿಷಯಗಳ ಚರ್ಚೆ ಈ ಪುಸ್ತಕದಲ್ಲಿದೆ.

೩೯೨ ಪುಟಗಳ ಈ ಪುಸ್ತಕ ೧೧ ಅಧ್ಯಾಯಗಳಲ್ಲಿದೆ. ಪ್ರತಿ ಅಧ್ಯಾಯದಲ್ಲಿ ೧೦, ೧೫, ೨೦ ವಿಷಯಗಳ ಬಗ್ಗೆ ವಿವರಣೆ ಇದೆ. ಕೈಗಾರಿಕೆಗೆ ಮುಖ್ಯವಾಗಿ ಅಗತ್ಯವಾದ ಕೈಗಾರಿಕಾ ಹಣಕಾಸಿನ ಬಗ್ಗೆ ಸಮಗ್ರ ಚಿತ್ರಣವನ್ನು ಕೊಟ್ಟಿದ್ದಾರೆ. ಇಲ್ಲಿ ಚರ್ಚಿಸಲಾಗಿರುವ ವಿಷಯಗಳೆಂದರೆ – ಕೈಗಾರಿಕಾ ಹಣಕಾಸಿನ ಮೂಲಗಳಾದ (೧) ವಾಣಿಜ್ಯ ಬ್ಯಾಂಕುಗಳು (೨) ಭಾರತದ ಸ್ಟೇಟ್ ಬ್ಯಾಂಕು (೩) ಬ್ಯಾಂ-ಕೇತರ ಹಣಕಾಸು ಸಂಸ್ಥೆಗಳು (೪) ಕೈಗಾರಿಕಾ ಸಹಕಾರ ಸಂಘಗಳು (೫) ಸಾಲಖಾತ್ರಿ ಯೋಜನೆ (೬) ರಾಷ್ಟ್ರೀಯ ಸಣ್ಣ ಕೈಗಾರಿಕೆಗಳ ನಿಗಮ (೭) ದೇಶೀಯ ಬ್ಯಾಂಕರರು ಮತ್ತು ಹಣದ ಲೇವಾದೇವಿದಾರರು (೮) ವಿಶೇಷ ಹಣಕಾಸಿನ ಸಂಸ್ಥೆಗಳು (೯) ಭಾರತದ ರಫ್ತು-ಆಮದು ಬ್ಯಾಂಕು (೧೦) ಅಂತರರಾಷ್ಟ್ರೀಯ ಹಣಕಾಸು ನಿಗಮ (೧೧) ಲಾಭದ ಮರುಹೂಡಿಕೆ (೧೨) ಷೇರು ಪತ್ರಗಳು (೧೩) ಸಾಲಪತ್ರಗಳು (೧೪) ಋಣ ಪತ್ರಗಳು ಅಲ್ಲದೆ ವಿದೇಶೀ ಬಂಡವಾಳ, ಅದರ ಮಹತ್ವ, ಈ ಬಗ್ಗೆ ಸರ್ಕಾರದ ನೀತಿಧೋರಣೆ, ವಿದೇಶೀ ನೇರ ಹೂಡಿಕೆ, ವಿದೇಶೀ ನೇರ ಹೂಡಿಕೆಯಲ್ಲಿ ಇತ್ತೀಚಿನ ವಿದ್ಯಮಾನಗಳು, ಅಭಿವೃದ್ಧಿಶೀಲ ದೇಶಗಳಲ್ಲಿ ವಿದೇಶೀ ನೇರ ಹೂಡಿಕೆಯ ಹೆಚ್ಚಳ, ವಿದೇಶೀ ಸಾಂಸ್ಥಿಕ ಹೂಡಿಕೆ – ಹೀಗೆ ಕೃತಿಯು ಕೈಗಾರಿಕಾ ಅರ್ಥಶಾಸ್ತ್ರದ ಸಂಪೂರ್ಣ ಆಯಾಮವನ್ನು ಪರಿಚಯಿಸುತ್ತದೆ.

ಅನುಭವೀ ಲೇಖಕರಾದ ಡಾ. ಕೃಷ್ಣಯ್ಯಗೌಡರು ವಿಷಯದ ಜೊತೆಗೇ ಅರ್ಥಶಾಸ್ತ್ರ, ಕೈಗಾರಿಕೆಗಳಲ್ಲಿ ಬರುವ ತಾಂತ್ರಿಕ ಶಬ್ದಗಳನ್ನು ಸಮರ್ಥವಾಗಿ ಕನ್ನಡದಲ್ಲಿ ಕೊಟ್ಟಿದ್ದಾರೆ. ಸುಲಲಿತವಾದ ಭಾಷೆಯಿಂದಾಗಿ ಪುಸ್ತಕ ಸರಾಗವಾಗಿ ಓದಿಸಿಕೊಂಡುಹೋಗುತ್ತದೆ. Firm = ಉದ್ಯಮಸಂಸ್ಥೆ, diseconomics = ಅಪವ್ಯಯಗಳು, optimum = ಅತ್ಯಂತ ಹಿತಕರ ಗಾತ್ರ, efficiency of labour= ಶ್ರಮದಕ್ಷತೆ, conglomeration= ವಾಣಿಜ್ಯಕೂಟ, credit instrument= ಪತ್ತಿನ ಸಾಧನ, preference shares= ಒಲವಿನ ಷೇರುಗಳು – ಇತ್ಯಾದಿ ಗಮನ ಸೆಳೆಯುತ್ತವೆ.

ವಿಶ್ವವಿದ್ಯಾಲಯದ ವಿದ್ಯಾರ್ಥಿಗಳಿಗಾಗಿ ರಚಿಸಲಾಗಿರುವ ಈ ಪುಸ್ತಕದಲ್ಲಿ ಕೈಗಾರಿಕೆ, ಅರ್ಥಶಾಸ್ತ್ರಗಳ ಬಗ್ಗೆ ದೊರೆಯುವ ಪದಸಂಪತ್ತು ಅಪರಿಮಿತ. ಇಂಥಾ ಪದಗಳನ್ನು ಹುಡುಕುವುದು ಕಷ್ಟ. ಆದ್ದರಿಂದ ಲೇಖಕರು ಪುಸ್ತಕದ ಕೊನೆಯಲ್ಲಿ ಒಂದೆರಡು ಪುಟಗಳ ಅಕಾರಾದಿ – Index ಅನ್ನು ಒದಗಿಸಿದರೆ ಪುಸ್ತಕದ ಮೌಲ್ಯ ಹೆಚ್ಚುವುದಲ್ಲದೆ, ಅಧ್ಯಯನಾಸಕ್ತರಿಗೆ ತುಂಬ ಉಪಯುಕ್ತವಾಗುತ್ತದೆ.

ಡಾ. ಎನ್. ಗೋಪಾಲಕೃಷ್ಣ

## ಜುಲೈ ೨೦೨೨ ರಲ್ಲಿ ಆಯೋಜಿಸಲಾಗಿರುವ ಕಾರ್ಯಕ್ರಮಗಳು

೧೫-೦೭-೨೦೨೨. ಶುಕ್ರವಾರ ಸಂಜೆ : ೦೫-೦೦ ಗಂಟೆಗೆ

ಸ್ಥಳ : ಎಂ.ವಿ.ಸೀ. ಸಭಾಂಗಣ, ಬಿ.ಎಂ.ಶ್ರೀ. ಪ್ರತಿಷ್ಠಾನ

ರಾಸ ಸಾಹಿತ್ಯ ಮತ್ತು ಸಮೇತನಹಳ್ಳಿ ರಾಮರಾವ್ ದತ್ತಿ, ಪ್ರೊ. ಡಿ.ಲಿಂಗಯ್ಯ ದತ್ತಿ, ಪ್ರೊ. ಟಿ.ಎಸ್.ವೆಂಕಣ್ಣಯ್ಯ ದತ್ತಿ ಪ್ರೊ. ತೀ.ನಂ.ಶ್ರೀ.ದತ್ತಿ ಮತ್ತು ಶ್ರೀಮತಿ ಶಾರದಮ್ಮ ಹನುಮಯ್ಯ ದತ್ತಿ ಕಾರ್ಯಕ್ರಮ

ವಿಷಯ : ಪ್ರೊ. ಡಿ.ಲಿಂಗಯ್ಯನವರ ಬದುಕು-ಸಾಧನೆ

ಉಪನ್ಯಾಸಕರು : ಡಾ. ಟಿ.ಕೆ. ಕೆಂಪೇಗೌಡ

ಸಹ ಪ್ರಾಧ್ಯಾಪಕರು, ಮಹಾರಾಜ ಕಾಲೇಜು, ಮೈಸೂರು

# ಬಿ.ಎಂ.ಶ್ರೀ. ಪ್ರತಿಷ್ಠಾನದಲ್ಲಿ ನಡೆದ ಕಾರ್ಯಕ್ರಮಗಳ ವರದಿ

೧೬-೦೬-೨೦೨೨

**ಶ್ರೀಮತಿ ಎಸ್.ಕೆ. ಪ್ರೇಮ ಮತ್ತು ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯ ದತ್ತಿ ಉಪನ್ಯಾಸ**

**ವಿಷಯ : ಅಕ್ಕಮಹಾದೇವಿ ವಚನಗಳ ವಿವೇಚನೆ**

**ಉಪನ್ಯಾಸಕರು : ಡಾ. ಎಸ್. ಎಚ್. ಭುವನೇಶ್ವರ, ನಿವೃತ್ತ ಪ್ರಾಧ್ಯಾಪಕರು ಹಾಗೂ ವಿಮರ್ಶಕರು**




ಕಾರ್ಯಕ್ರಮದ ಆರಂಭದಲ್ಲಿ ಡಾ. ಶಾಂತರಾಜು ಅವರು ಎಲ್ಲರನ್ನೂ ಸ್ವಾಗತಿಸುತ್ತಾ ಈಗಿನ ತಲೆಮಾರಿನ ನಿವೃತ್ತ ಕನ್ನಡ ಪ್ರಾಧ್ಯಾಪಕರೆಲ್ಲರಿಗೂ 'ಮೇಷ್ಟರು' ಎಂದೇ ಚಿರಪರಿಚಿತರಾಗಿರುವ ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯನವರು, ೨೦೨೦ರಲ್ಲಿ ಬಿಎಂಶ್ರೀ ಪ್ರತಿಷ್ಠಾನವು ಕೊಡಮಾಡುವ ಪ್ರತಿಷ್ಠಿತ 'ಶ್ರೀ ಸಾಹಿತ್ಯ' ಪ್ರಶಸ್ತಿ ಪುರಸ್ಕೃತರು. ಪ್ರಶಸ್ತಿ ಸ್ವೀಕರಿಸಿದ ಕೂಡಲೆ ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯನವರು ಪ್ರತಿಷ್ಠಾನದಲ್ಲಿ ದತ್ತಿಯೊಂದನ್ನು ಸ್ಥಾಪಿಸಿದರು. ಈ ದಿನದ ಕಾರ್ಯಕ್ರಮ ದತ್ತಿ ನಿಧಿಯ ಎರಡನೇ ಕಾರ್ಯಕ್ರಮವಾಗಿದೆ. ಡಾ.ಎಸ್.ಎಚ್. ಭುವನೇಶ್ವರ, ಬಹಳ ಸರಳ ಮತ್ತು ಸ್ನೇಹಜೀವಿ. ಪ್ರತಿಷ್ಠಾನದ ಜೊತೆ ಆತ್ಮೀಯ ಸಂಬಂಧ ಹೊಂದಿರುವವರು. ನಮ್ಮ ಕೋರಿಕೆಯನ್ನು ಮನ್ನಿಸಿ, ಈ ದಿನ ಶರಣೆ ಮತ್ತು ವಚನಕಾರ್ತಿ ಅಕ್ಕಮಹಾದೇವಿಯವರ ವಚನಗಳ ಇಂದಿನ ಪ್ರಸ್ತುತತೆ ಮತ್ತು ಕೆಲವು ವಚನಗಳ ವಿವೇಚನೆಯನ್ನು ಕುರಿತು ಮಾತನಾಡಲು ಒಪ್ಪಿ ಆಗಮಿಸಿದ್ದಾರೆ. ಕಾರಣಾಂತರಗಳಿಂದ ದತ್ತಿದಾನಿಗಳಿಬ್ಬರೂ ಕಾರ್ಯಕ್ರಮದಲ್ಲಿ ಖುದ್ದು ಹಾಜರಾಗಲು ಸಾಧ್ಯವಾಗಿಲ್ಲ. ಜಾಲತಾಣದ ಮೂಲಕ ಉಪನ್ಯಾಸದಲ್ಲಿ ನಮ್ಮೊಂದಿಗೆ ಭಾಗಿಗಳಾಗಿದ್ದಾರೆ. ಕಾರ್ಯಕ್ರಮದಲ್ಲಿ ವಿದ್ವಾಂಸರನೇಕರು ಹೆಚ್ಚಿನ ಸಂಖ್ಯೆಯಲ್ಲಿ ಸಭಾಂಗಣದಲ್ಲಿ ಸೇರಿರುವುದು, ಶ್ರೀ ಭುವನೇಶ್ವರ ಅವರ ಬಗ್ಗೆ ಇರುವ ಒಲವು ವ್ಯಕ್ತವಾಗುತ್ತದೆ ಮತ್ತು ಅವರ ವಿದ್ವತ್ಪೂರ್ಣ ಉಪನ್ಯಾಸ ಕೇಳಲು ಕಾತುರರಾಗಿದ್ದೀರಿ. ನಿಮಗೆಲ್ಲರಿಗೂ ಮತ್ತು ಉಪನ್ಯಾಸಕರಿಗೂ ನಾನು ಆತ್ಮೀಯ ಸ್ವಾಗತ ಕೋರುತ್ತೇನೆಂದು, ಡಾ. ಶಾಂತರಾಜು ಉಪನ್ಯಾಸಕರನ್ನು ವೇದಿಕೆಗೆ ಆಹ್ವಾನಿಸಿದರು. ಪ್ರಾಸ್ತಾವಿಕವಾಗಿ ಮಾತನಾಡಿದ ಡಾ. ಬೈರಮಂಗಲ ರಾಮೇಗೌಡ ಅವರು ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯ ಅವರು ಪ್ರಾಧ್ಯಾಪಕರಾಗಿ, ಕವಿಯಾಗಿ, ವಿಮರ್ಶಕರಗಿ ಪಡೆದುಕೊಂಡ ಯಶಸ್ಸು ಮತ್ತು ದತ್ತಿ ವಿಚಾರವನ್ನು ಪ್ರಸ್ತಾಪಿಸಿ ಮಹಾದೇವಿಯಕ್ಕನ ದಿಟ್ಟತನವನ್ನು ವಿವರಿಸಿದರು.

ಪ್ರಾರಂಭದಲ್ಲಿ ಶ್ರೀ ಭುವನೇಶ್ವರ ಅವರು 'ಆದ್ಯ' ವಚನಕಾರರು ಎಂದರೆ ಯಾರು? ಅವರ ಕಾಲಘಟ್ಟವೇನು? ಎಂಬ ವಿಚಾರಗಳನ್ನು ಚರ್ಚಿಸಿದರು. ಜೇಡರ(ದೇವರ) ದಾಸಿಮಯ್ಯ ಮತ್ತು ಶಂಕರ ದಾಸಿಮಯ್ಯ, ಬಸವಣ್ಣನ ಸಮಕಾಲೀನಳಾಗಿ ಅಕ್ಕಮಹಾದೇವಿ ಹಿರಿಯ ಶಿವಶರಣೆಯೆನಿಸಿಕೊಂಡವಳು. ಅವಳು ರಚಿಸಿರುವ ವಚನಗಳಲ್ಲಿ ಭಕ್ತಿ, ವೈರಾಗ್ಯ ಮತ್ತು ಅನುಭವದ ಛಾಯೆಗಳು ತುಂಬಿರುತ್ತವೆ. ಕನ್ನಡದ ಆಣಿಮುತ್ತುಗಳಾಗಿ ಕಂಡುಬರುತ್ತವೆ. ಅಕ್ಕಮಹಾದೇವಿಯ ಕೆಲವು ವಚನಗಳನ್ನು ವಾಚಿಸಿ, ಅರ್ಥೈಸಿ ಕೆಲವು ನುಡಿಗಟ್ಟುಗಳಲ್ಲಿ ಕಂಡುಬಂದಂತಹ ದೃಷ್ಟಾಂತಗಳನ್ನು ವಿವರಿಸಿ ಅವುಗಳ ಪ್ರಸ್ತುತತೆಯನ್ನು ಹೋಲಿಸಿದರು. ಸಂದರ್ಭಾನುಸಾರವಾಗಿ ವಚನ ಪಿತಾಮಹ ಖ್ಯಾತಿಯ ಫ.ಗು. ಹಳಕಟ್ಟಿಯವರ ವಚನಗಳ ಸಂಗ್ರಹ ಕಾರ್ಯದ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸಿದರು. ಇದೇ ಸಂದರ್ಭದಲ್ಲಿ ಇತರ ವಚನಗಳ ತೌಲನಿಕ ವಿವೇಚನೆಯನ್ನು ಕೂಡ ಮಾಡಿದರು.

ಕಾರ್ಯಕ್ರಮವು ಶ್ರೀ ಬಿ.ಎಸ್. ಗುರುಪ್ರಸಾದ್ ಅವರ ವಂದನಾರ್ಪಣೆಯೊಂದಿಗೆ ಮುಕ್ತಾಯಗೊಂಡಿತು.

# ಬಿಎಂಶ್ರೀ ಪ್ರತಿಷ್ಠಾನ ನಡೆದು ಬಂದ ದಾರಿ –೫

ಬಿ.ಆರ್. ರವೀಂದ್ರನಾಥ



## ಪ್ರತಿಷ್ಠಾನವನ್ನು ಕಟ್ಟಿ ಬೆಳೆಸಿದ ಮಹನೀಯರು

### ನಾಡೋಜ ಡಾ. ದೇಶಹಳ್ಳಿ ಜಿ. ನಾರಾಯಣ
(ಸೆಪ್ಟೆಂಬರ್ ೨, ೧೯೨೫ – ನವೆಂಬರ್ ೧೯, ೨೦೧೧)

ಕನ್ನಡ ದೇಶಭಕ್ತರೂ ಪತ್ರಿಕಾ ಸಂಪಾದಕರೂ ಕಾಂಗ್ರೆಸ್ ಭಕ್ತರೂ ಸಂಘಟಕರೂ ಆದ ದೇಶಹಳ್ಳಿ ಜಿ.ನಾರಾಯಣ ಅವರು ಮಂಡ್ಯ ಜಿಲ್ಲೆಯ ಮದ್ದೂರು ತಾಲ್ಲೂಕಿಗೆ ಸೇರಿದ ದೇಶಹಳ್ಳಿಯಲ್ಲಿ ೨–೯–೧೯೨೫ರಲ್ಲಿ ಜನಿಸಿದರು. ೧೯೪೨ರಲ್ಲಿ 'ಬ್ರಿಟಿಷರೇ ಭಾರತ ಬಿಟ್ಟು ತೊಲಗಿ' 'ಚಳುವಳಿಯಲ್ಲಿ ಭಾಗವಹಿಸಿ ಸೆರೆಮನೆ ಸೇರಿದ್ದರು. ೧೯೫೦ರಲ್ಲಿ ಬೆಂಗಳೂರು ಕಾರ್ಪೊರೇಷನ್ನಿನ ಕೌನ್ಸಿಲರ್ ಆಗಿದ್ದ ಇವರು ೧೯೬೪ರಲ್ಲಿ ಮೇಯರಾಗಿ ಚುನಾಯಿತರಾದರು. ಜಿ. ನಾರಾಯಣರು ೧೯೬೯ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ, ೧೯೮೦ರಲ್ಲಿ ಕರ್ನಾಟಕ ಪ್ರೆಸ್ ಅಕಾಡೆಮಿ ಅಧ್ಯಕ್ಷರಾಗಿ, ೧೯೯೨ರಲ್ಲಿ ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರಾಗಿ ಸಲ್ಲಿಸಿರುವ ಸೇವೆ ಸ್ಮರಣೀಯವಾದುದು. ಕನ್ನಡ ಸಾಹಿತ್ಯ ಪರಿಷತ್ತು ಉತ್ತಮ ಕೆಲಸ ಮಾಡುವಲ್ಲಿ ಜಿ. ನಾರಾಯಣರು ವಹಿಸಿದ ಪಾತ್ರ ಮಹತ್ವಪೂರ್ಣವಾದುದು. ಕರ್ನಾಟಕ ಜಾನಪದ ಅಕಾಡೆಮಿಯ ಅಧ್ಯಕ್ಷತೆಯನ್ನೂ ಅಲಂಕರಿಸಿದ್ದ ನಾರಾಯಣರು ಈ ಲೋಕವನ್ನಗಲುವ ಸಂದರ್ಭದವರೆಗೆ 'ಜಾನಪದ ಲೋಕ' ಟ್ರಸ್ಟಿನ ಅಧ್ಯಕ್ಷರಾಗಿದ್ದರು.

ಕಾಂಗ್ರೆಸ್ ಪಕ್ಷದ ವಾರ್ತಾ ಪತ್ರದ ವ್ಯವಸ್ಥಾಪಕರಾದ ಇವರು ತಮ್ಮದೇ ಆದ 'ಸ್ವತಂತ್ರ ಮುದ್ರಣಾಲಯ'ವನ್ನು ಬೆಂಗಳೂರು ಚಾಮರಾಜಪೇಟೆಯಲ್ಲಿ ಸ್ಥಾಪಿಸಿ, ವಿನೋದ ಮಾಸಪತ್ರಿಕೆಯನ್ನು ಸಂಪಾದಿಸಿ ಪ್ರಕಟಿಸಿದರು. ಈಗಲೂ ಆ ಪತ್ರಿಕೆ ಪ್ರಕಟವಾಗುತ್ತಿದೆ.

ಜಿ. ನಾರಾಯಣರು ಕರ್ನಾಟಕ ಗಮಕ ಕಲಾ ಪರಿಷತ್, ಶಶಿ ಕಲಾವಿದರು, ಕರ್ನಾಟಕ ಲೇಖಕಿಯರ ಸಂಘ, ಶಾರದಾವಿದ್ಯಾಪೀಠ, ಉದಯಭಾನು ಕಲಾಸಂಘ ಮುಂತಾದ ಹಲವಾರು ಸಂಸ್ಥೆಗಳ ಸ್ಥಾಪನೆಗೆ ಬೆಂಬಲ ನೀಡಿದ್ದಲ್ಲದೆ ಮಾರ್ಗದರ್ಶಕರೂ ಆಗಿದ್ದರು.

ಬೆಂಗಳೂರು ನಗರಪಾಲಿಕೆಯ ಮುಂದೆ ಕೆಂಪೇಗೌಡನ ಪ್ರತಿಮೆಯನ್ನು ಸ್ಥಾಪಿಸಿದ ಹೆಗ್ಗಳಿಕೆ ಇವರದು. ಇವರು 'ಅಕ್ಷರ ನೀವ್ ಕಲಿಯಿರಿ' ಎಂಬ ಗೋವಿನ ಹಾಡಿನ ಧಾಟಿಯ ೧೦೦ ಪದ್ಯಗಳ ಕೃತಿಯನ್ನು ಬರೆದಿದ್ದಾರೆ.

ಶ್ರೇಷ್ಠ ಸಂಘಟಕರೂ, ಸಾಮಾಜಿಕ ಕಾರ್ಯಕರ್ತರೂ ಆಗಿದ್ದ ಜಿ. ನಾರಾಯಣರು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ಒಂದು ಹೊಸ ಶಕೆ ಪ್ರಾರಂಭಿಸಿದರು. ಸಾಹಿತಿಗಳೂ ವಿದ್ವಾಂಸರೂ ಅಲ್ಲದ ಪತ್ರಕರ್ತರೊಬ್ಬರು ಅಧ್ಯಕ್ಷರಾದುದು ಅದೇ ಮೊದಲು.

ನಾಲ್ಕು ಅಖಿಲಭಾರತ ಕನ್ನಡ ಸಾಹಿತ್ಯ ಸಮ್ಮೇಳನಗಳು ಜಿ. ನಾರಾಯಣರ ಅಧಿಕಾರಾವಧಿಯಲ್ಲಿ ನಡೆದವು. ಈ ಸಮ್ಮೇಳನಗಳಲ್ಲಿ ಮೊದಲ ಬಾರಿಗೆ ದೆಹಲಿಯಲ್ಲಿ ೧೯೭೮ರಲ್ಲಿ ಜಿ. ಪಿ. ರಾಜರತ್ನಂ ಅವರ ಅಧ್ಯಕ್ಷತೆಯ ೫೦ನೇ ಸಮ್ಮೇಳನವನ್ನು ಮಾಡಿದ್ದು ಪರಿಷತ್ತಿನ ಇತಿಹಾಸದಲ್ಲಿ ಒಂದು ದಾಖಲೆ ಆಗಿದೆ.

ಜಿ. ನಾರಾಯಣರು ವಿದ್ವಾಂಸಲ್ಲರದಿದ್ದರೂ ಶಾಸ್ತ್ರ ಪಾಂಡಿತ್ಯವಿಲ್ಲದಿದ್ದರೂ ಅವರ ಶಾಸ್ತ್ರಪ್ರೇಮ ವಿದ್ವತ್ ಪ್ರೇಮಕ್ಕೆ ಈ ಸಂಶೋಧನಾ ವಿಭಾಗದ ಕಾರ್ಯಗಳು ಸಾಕ್ಷಿಯಾಗಿವೆ. ಕನ್ನಡಕ್ಕೆ ಸಂಬಂಧಿಸಿದ ಕಾರ್ಯಚಟುವಟಿಕೆಗಳನ್ನು ನಾನಾ ರೀತಿಯಲ್ಲಿ ಬೆಳೆಸಿದವರಲ್ಲಿ ಜಿ. ನಾರಾಯಣರು ಅಗ್ರಗಣ್ಯರಾಗಿದ್ದಾರೆ. ಕನ್ನಡ ಪರವಾದ ಮಹತ್ವದ ಹೋರಾಟಗಳಲ್ಲಿ ಜಿ. ನಾರಾಯಣರು ಗಮನಾರ್ಹವಾದ ಪಾತ್ರವಹಿಸಿದ್ದಾರೆ. ಅದರಲ್ಲೂ ಅವರು ಕರ್ನಾಟಕ ಏಕೀಕರಣ ಚಳುವಳಿ ಮತ್ತು ಗೋಕಾಕ್ ಚಳುವಳಿಗಳಲ್ಲಿ ನಿರ್ವಹಿಸಿದ ಪಾತ್ರಗಳು ಗಮನಾರ್ಹವಾದದ್ದು. ಅವರು ಗೋಕಾಕ ಸಮಿತಿಯ ಸದಸ್ಯರೂ ಆಗಿದ್ದರು.

ಕರ್ನಾಟಕ ಏಕೀಕರಣ ಹೋರಾಟದಲ್ಲಿ ಇವರು ವಹಿಸಿದ ಪ್ರಮುಖ ಪಾತ್ರವನ್ನು ಗುರುತಿಸಿ ರಾಜ್ಯ ಸರ್ಕಾರವು ಕರ್ನಾಟಕ ಏಕೀಕರಣ ಪ್ರಶಸ್ತಿ ನೀಡಿ ಗೌರವಿಸಿದೆ.

ಜಿ ನಾರಾಯಣ ಅವರು ರಚಿಸಿದ ಕೃತಿಗಳು

'ಅಕ್ಷರವ ನೀವ್ ಕಲಿಯಿರಿ', 'ಮಲೇರಿಯಾ ಹಾವಳಿ', 'ಕಬ್ಬಿನ ಕಥಾಂತರ', 'ರಾಷ್ಟ್ರೀಯ ಪದಗಳು', 'ಹೆಚ್ಚು ಬೆಳೆಯನ್ನು ಬೆಳೆಯಿರಿ'

ನಾಡೋಜ ಡಾ. ದೇಶಹಳ್ಳಿ ಜಿ.ನಾರಾಯಣ ಅವರು ಬಿ.ಎಂ.ಶ್ರೀ. ಪ್ರತಿಷ್ಠಾನದಲ್ಲಿ ದಿನಾಂಕ : ೨೭–೦೪–೨೦೧೦ ರಿಂದ ೨೫–೧೦–೨೦೧೧ರ ವರೆಗೆ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದಾರೆ.



# ಎಂ.ವಿ.ಸೀ. ಬದುಕು ಬರಹ – ೨೮

ಹಿಂದಿನ ಸಂಚಿಕೆಯಿಂದ

ಹೀಗೆ ಈ ಕತೆಯಲ್ಲಿ ಎರಡು 'ಕಾಪಾಡುವ' ಪ್ರಸಂಗಗಳಿವೆ: ಮುಸಲ್ಮಾನನೊಬ್ಬ ಹಿಂದೂ ಒಬ್ಬನನ್ನು (ದಾವೂದ್‌ಖಾನ್ ಅನಂತಯ್ಯನನ್ನು) ತನ್ನ ಚುರುಕು ಚಾಲನೆಯಿಂದ ಕಾಪಾಡಿದ್ದು, ಇನ್ನೊಂದು–ಹಿಂದೂ ಒಬ್ಬ ಮುಸ್ಲಿಂ ಹೆಣ್ಣಿನ ಶೀಲವನ್ನು (ಬಾನೂ ಬೇಗಂಳನ್ನು ಅನಂತಯ್ಯ) ಕಾಪಾಡಿದ್ದು. ಇವುಗಳ ನಡುವೆ ಮತ್ತೂ ಕೆಲವು ಸೂಕ್ಷ್ಮಗಳು ಅಡಕವಾಗಿವೆ: ಮನುಷ್ಯನನ್ನು ಮನುಷ್ಯ ಕಾಣಬೇಕಾದ ಬಗೆ; ಮತ್ತೊಂದು, ಸ್ನೇಹಿತನಿಗೆ ಕತೆ ಹೇಳಿ ಕೊನೆಗೆ ಅನಂತಯ್ಯ ಆಡುವ ಮಾತಿನ ವಿವೇಕ: "ಮನೆಯ ಬಾಗಿಲ ಅಗಣಿ ಮುರಿದರೂ ಚಿಂತೆಯಿಲ್ಲ. ಮನಸ್ಸಿನ ಅಗಣಿ ಭದ್ರವಾಗಿರಬೇಕು" ಎಂಬುದು; ಮಗುದೊಂದು ತರುಣಿಯ ಆಕರ್ಷಣೆ–ಕರ್ತವ್ಯಪ್ರಜ್ಞೆಗಳ ನಡುವಣ ತುಯ್ದಾಟ; ಮತ್ತೂ ಒಂದು, ಅಸಹಾಯಕ ಸನ್ನಿವೇಶವೊಂದರಲ್ಲಿ ಸುಲಭವಾಗಿ ತರುಣಿಯೊಬ್ಬಳು ಅರ್ಪಿಸಿಕೊಂಡಾಗ ಅದನ್ನು ದುರುಪಯೋಗಪಡಿಸಿಕೊಳ್ಳದ ನಿರೂಪಕನ ನೈತಿಕ ಎಚ್ಚರ – ಹೀಗೆ ಕತೆಗೆ ಸಂಕೀರ್ಣ ರೂಪವೊದಗಿ 'ಮುರಿದ ಅಗುಣಿ' ತುಂಬ ಯಶಸ್ವೀ ಕತೆ ಎನಿಸಿಕೊಳ್ಳುತ್ತದೆ.

ಎಂವಿಸೀ ಅವರು ರಚಿಸಿದ ಇತರ ಕಥೆಗಳೆಂದರೆ 'ತಾಯಿ ಮಗ', 'ಕೊಟ್ಟಣದ ನೀಲಮ್ಮ', 'ಹಾಲಿನ ಹನುಮಕ್ಕ', 'ಭಿಕ್ಷಾನ್ನದ ಭಾಗೀರಥಮ್ಮ', 'ಕಡಲೆಪುರಿ ಕೆಂಪಮ್ಮ', 'ಪೆಪ್ಪರಮೆಂಟು', 'ರತಿದೇವಿ' 'ಪರಿಹಾರ','ಚಿತ್ರಪಟ ತಾರೆ', 'ಹೆತ್ತವರ ಪುಣ್ಯ', 'ಹುಚ್ಚನ ಹಂಬಲು', 'ಅದೃಷ್ಟದ ಕರವಸ್ತ್ರ', 'ಕರುಣೆ'

–ಹೀಗೆ ಎಂ.ವಿ. ಸೀತಾರಾಮಯ್ಯನವರ ಕತೆಗಳು ವೈವಿಧ್ಯಪೂರ್ಣವಾಗಿವೆ. ಕೆಲವು ಕತೆಗಳು ಸಂತೋಷ ಕೊಡುವಷ್ಟರ ಮಟ್ಟಿಗೆ ಸಾರ್ಥಕವಾಗಿವೆ. 'ಹಸ್ತಪರಿಗ್ರಹಣ'ದಲ್ಲಿ ಭಾವ–ಮೈದುನರು ಚಲನಚಿತ್ರ ನೋಡಲು ಹೋಗಿ, ಮಧ್ಯೆ ಕುಳಿತ ಸುಂದರಿಯ ಕೈಯೆಂದು ಪರಸ್ಪರರ ಕೈಹಿಡಿದುಕೊಂಡು ಕುಳಿತಿದ್ದು, ಮಧ್ಯಂತರದಲ್ಲಿ ಬೆಳಕು ಬಂದಾಗ ತಾವು ಬೇಸ್ತುಬಿದ್ದುದನ್ನು ಅರಿತುಕೊಳ್ಳುತ್ತಾರೆ. ಹಾಗೆಯೇ 'ಹಾದಿಯ ಚೆಲುವೆ'; ನಿರೂಪಕ ರಸ್ತೆಯಲ್ಲಿ ಹೋಗುತ್ತಿರುವಾಗ ಅದೇ ಕಡೆ ಸೈಕಲ್ಲಿನಲ್ಲಿ ಬಂದ ಗೆಳೆಯನೊಬ್ಬ ಅವನನ್ನು ಕಂಡು ಕೆಳಗಿಳಿದು ಮುಂದೆ ಹೋಗುತ್ತಿದ್ದ ಹೆಣ್ಣೊಬ್ಬಳನ್ನು ಹುರುಪಿನಿಂದ ವರ್ಣಿಸುತ್ತಾನೆ; ಕೊನೆಗೆ ಅವಳು ನಿರೂಪಕನ ಹೆಂಡತಿಯೇ ಎಂದು ತಿಳಿದು ಪರಾರಿಯಾಗುತ್ತಾನೆ. ಇಂತಹವು ಸೀಮಿತ ಪರಿಣಾಮವುಳ್ಳವು. ಮತ್ತೆ ಕೆಲವು ಇಷ್ಟು ಲಘುವಾಗದಿದ್ದರೂ ಮನಸ್ಸಿಗೆ ಹಿತವುಂಟುಮಾಡುವಂತಹವು. ಹೆಂಡತಿಗೆ ಬರೆದ ಕಾಗದವೊಂದನ್ನು ಸ್ನೇಹಿತನೊಬ್ಬನಿಗೆ ಕಳಿಸುವುದರಿಂದ ತಪ್ಪು ತಿಳಿವಳಿಕೆ ಮೂಡುವುದೂ ಆನಂತರ ಅವನಿಂದ ಕಾಗದ ಬಂದಾಗ ಅದು ನಿವಾರಣೆಯಾಗುವುದೂ ವಸ್ತುವಾಗುಳ್ಳದ್ದು 'ನೀಲಿಯ ಕವರು.' ಈ ಕತೆಗಾರರಿಗೆ ಕೆಲವೊಮ್ಮೆ ಓದುಗನನ್ನು ಮನಸ್ಸಿನಲ್ಲಿರಿಸಿಕೊಂಡು ಕುತೂಹಲವನ್ನುಂಟುಮಾಡುವ ಚಾಪಲ್ಯವಿರುವುದೂ ಕೆಲವೆಡೆಗಳಲ್ಲಿ ಸ್ಪಷ್ಟವಾಗುತ್ತದೆ. 'ಕೊಳ್ಳಿದೆವ್ವ' ಅಂತಹ ಕತೆ. ಮತ್ತೆ ಕೆಲವದರಲ್ಲಿ, ಈಗಾಗಲೇ ಗುರುತಿಸಿರುವಂತೆ, ಪರಿಣಾಮಕ್ಕೋಸ್ಕರ ಕತೆಯನ್ನು ಅನವಶ್ಯಕವಾಗಿ ದುರಂತಗೊಳಿಸುವ ರೀತಿ. 'ಪೆಪ್ಪರಮೆಂಟು', 'ಬಾಚಿ ತಬ್ಬಕೊಂಡಳು', 'ಕಡಲೆಪುರಿ ಕೆಂಪಮ್ಮ' ಮುಂತಾದವು ಇಂತಹ ಕೆಲವು ಕತೆಗಳು. ಎಂವಿಸೀ ಅವರ ಕೆಲವು ಕತೆಗಳಲ್ಲಿ ನವಿರು ಹಾಸ್ಯಕ್ಕೂ ಜಾಗವಿದೆ. 'ಹಸ್ತಪರಿಗ್ರಹಣ' 'ಹಾದಿಯ ಚೆಲುವೆ' ಇಂತಹವು. ಮತ್ತೆ ಕೆಲವು ಗಂಭೀರ ವಸ್ತುವಿನ, ಮನಕಲಕುವ ಪ್ರಸಂಗಗಳ, ಎದೆವುಗುವ ಶೈಲಿಯ ನಿರೂಪಣೆಯುಳ್ಳ ಕತೆಗಳು; ಅಂತಹ ಕೆಲವನ್ನು ನಾವೀಗಾಗಲೇ ವಿವರವಾಗಿ ಪರಿಶೀಲಿಸಿದ್ದೇವೆ.

ಎಂವಿಸೀ ಅವರ ಕತೆಗಳು ನಡೆಯುವುದೆಲ್ಲ ಹಳೆಯ ಮೈಸೂರು ಸಂಸ್ಥಾನದಲ್ಲಿ. ಅವರ ಬಹುಪಾಲು ಕತೆಗಳು ಸಂಭವಿಸುವುದು ಮಧ್ಯಮವರ್ಗದ ಬ್ರಾಹ್ಮಣ ಮನೆಗಳಲ್ಲಿ, ಅಥವಾ ಅವರ ಕಣ್ಣಿಗೆ ಕಾಣುವ ಕೆಳವರ್ಗದ ಮನೆಗಳಲ್ಲಿ. ನಿರೂಪಣೆಯಲ್ಲಿ ಮಾತ್ರವಲ್ಲದೆ, ಸಂಭಾಷಣೆಗಳಲ್ಲಿಯೂ ಬಳಕೆಯಾಗಿರುವುದು ಬಹುತೇಕ ಹಳೆಯ ಮೈಸೂರು ಭಾಗದ ಮಧ್ಯಮವರ್ಗದ ಬ್ರಾಹ್ಮಣರ ಭಾಷೆ. ಒಳ್ಳೆಯತನ, ಸಜ್ಜನಿಕೆ, ಔದಾರ್ಯ–ಇಂತಹ ಗುಣಗಳು ಕೆಳವರ್ಗದ ಜನರಲ್ಲಿಯೂ ಧಾರಾಳವಾಗಿರುವ ಗುಣಗಳೆಂದು ತೋರಿಸುವುದು ಇಲ್ಲಿನ ಉದ್ದೇಶ. ನೇರವಾಗಿ ಪ್ರಥಮಪುರುಷ ನಿರೂಪಣೆ, ಆತ್ಮಾರ್ಥಕ ನಿರೂಪಣೆ ಮತ್ತು ಯಾರೋ ಹೇಳಿದ ಕತೆಯನ್ನು ನಿರೂಪಕ ಮರುನಿರೂಪಿಸುವುದು– ಎಂವಿಸೀ ಅವರ ಕತೆಗಳ ಕಥಾ ಹೆಣಿಗೆಯ ವಿಧಾನ. ಇವುಗಳಲ್ಲಿ ಕೊನೆಯದಂತೂ ಮಾಸ್ತಿಯವರ ಮಾರ್ಗ. ಸಮಾಜದ ಅನಿಷ್ಟಗಳ, ವಿಶೇಷವಾಗಿ ಅಸಮತೆಯ ನಿವಾರಣೆಗೆ ಅದರ ಬಿಡಿ ಘಟಕಗಳಾದ ವ್ಯಕ್ತಿಗಳ ಸುಧಾರಣೆಯೇ ಸೂಕ್ತ ದಾರಿಯೆಂಬುದು ಕತೆಗಾರರ ತಿಳಿವಳಿಕೆ. ಅವರಿಗೆ ವರ್ಗಸಂಘರ್ಷದಲ್ಲಿಯಾಗಲೀ, ಕ್ರಾಂತಿಕಾರಕ ಮಾರ್ಗದಲ್ಲಿಯಾಗಲೀ ನಂಬಿಕೆಯಿಲ್ಲ. ಈ ಕತೆಗಳಲ್ಲಿ ಕೆಲವು ಕಡೆಗಳಲ್ಲಿ ಹೆಣ್ಣಿನ ನೈತಿಕ ತೊಳಲಾಟದ ಚಿತ್ರವಿದ್ದರೂ, ಗಂಡುಗಳ ಮನಸ್ಸಿನ ತಿಕ್ಕಾಟಕ್ಕೆ ಆಸ್ಪದವಿಲ್ಲ. ಕತೆಗಳು ಸಂಭವಿಸುವುದು ಒಪ್ಪಿತವಾದ ಸಾಮಾಜಿಕ ನೈತಿಕ ಮೌಲ್ಯಗಳ ನಂಬಿಕೆಯಡಿಯಲ್ಲಿ. ಸಂಪ್ರದಾಯವನ್ನು ಪ್ರಶ್ನಿಸುವ ಅಥವಾ ಧಿಕ್ಕರಿಸುವ ಯಾವ ಪ್ರಸಂಗವನ್ನೂ ಎಂವಿಸೀ ಅವರ ಕತೆಗಳಲ್ಲಿ ಕಾಣಲಾರೆವು. ಹೀಗಾಗಿ ಎಂವಿಸೀ ಅವರ ಹಲವಾರು ಕತೆಗಳು ಒಳ್ಳೆಯ ಕತೆಗಳೆನ್ನಿಸಿಕೊಳ್ಳುತ್ತವೆ ಹಾಗೂ ಇಂದಿಗೂ ಸಂತೋಷ ನೀಡುತ್ತವೆಯಾದರೂ ಅವರು ಹೊಸಮಾರ್ಗವನ್ನೇನೂ ಸೃಷ್ಟಿಸಲಿಲ್ಲ ಎಂಬುದನ್ನು ನೆನಪಿನಲ್ಲಿರಿಸಿಕೊಳ್ಳಬೇಕು.

ಕಾದಂಬರಿ

ಎಂವಿಸೀ ಎಂಟು ಸ್ವತಂತ್ರ ಕಾದಂಬರಿಗಳನ್ನು ಬರೆದಿದ್ದಾರೆ: ರಚಿತವಾದ ಕ್ರಮದಲ್ಲಿ ಅವುಗಳೆಂದರೆ, 'ಭಾಗ್ಯಲಕ್ಷ್ಮಿ', 'ಮಾದನ ಮಗಳು', 'ಸೌಭಾಗ್ಯವತಿ', 'ನಂಜಿನ ಸವಿ', 'ಸ್ನೇಹದ ಕಾಣಿಕೆ', 'ತಾಯ ಬಯಕೆ', 'ಕುಂಕುಮ ಭಾಗ್ಯ' ಹಾಗೂ 'ಜೀವನದ ಜೊತೆಗಾತಿ'. ಎಲ್ಲವೂ ಸಾಮಾಜಿಕ ವಸ್ತುವನ್ನುಳ್ಳವು. ಮನುಷ್ಯ ಸಂಬಂಧಗಳನ್ನು ಹೇಗೆಯೋ ಹಾಗೆಯೇ ಸಾಮಾಜಿಕ ಸಮಸ್ಯೆಗಳನ್ನೂ ಒಳಗೊಳ್ಳುವ ಕಥಾವಸ್ತುವುಳ್ಳವು.

ಎಂವಿಸೀ ಅವರ ಮೊದಲ ಕಾದಂಬರಿ 'ಭಾಗ್ಯಲಕ್ಷ್ಮಿ' ೧೯೪೨ ರಲ್ಲಿ ಪ್ರಕಟವಾಯಿತು.

೭ ನೇ ಪುಟಕ್ಕೆ



# ಪದಚರಿತೆ

ಒಂದಷ್ಟು ಪದಗಳ
ಮೂಲಚೂಲಗಳ ಹುಡುಕಾಟ

– ಡಾ. ಪಿ.ವಿ. ನಾರಾಯಣ

**ಮೂಡಲಗಿರಿ:** ಇದರಲ್ಲಿ ಎರಡು ಪದಗಳು ಸೇರಿವೆ – ಮೂಡಲ ಮತ್ತು ಗಿರಿ; ಮೊದಲ ಶಬ್ದ ಅಚ್ಚಗನ್ನಡದ್ದಾದರೆ ಎರಡನೆಯದು ಸಂಸ್ಕೃತದ್ದು. ಮೂಡು ಎಂದರೆ ಹುಟ್ಟು, ಕಾಣಿಸಿಕೋ ಎಂದು ಅರ್ಥ. ಹೀಗಾಗಿ ಸೂರ್ಯ ಹುಟ್ಟುವ ದಿಕ್ಕನ್ನು ಮೂಡು ಎಂದು ಕರೆಯುವ ರೂಢಿ ಉಂಟಾಯಿತು. ಹತ್ತನೆಯ ಶತಮಾನದ ಕನ್ನಡ ಶಾಸನದಲ್ಲಿಯೇ ಇದರ ಪ್ರಯೋಗವಿದೆ. ಇದು ಮೂಡಣ್, ಮೂಡಲ್ ಎಂಬ ರೂಪಗಳನ್ನೂ ಪಡೆಯುತ್ತದೆ. 'ಮೂಡಣ್' ಎಂಬ ಪ್ರಯೋಗ ಪಂಪಭಾರತದಲ್ಲಿಯೇ ದೊರೆಯುತ್ತದೆ. ಆ ದಿಕ್ಕಿಗೆ ಎದುರು ಅಥವಾ ಅಭಿಮುಖ ಎಂಬರ್ಥದಲ್ಲಿ ಮೂಡಮೊಗ ಎಂಬ ಪ್ರಯೋಗವೂ ಪಂಪಭಾರತದಲ್ಲಿಯೇ ಇದೆ. ಹಳಗನ್ನಡದ ವ್ಯಂಜನದಿಂದ ಕೊನೆಯಾಗುವ ಶಬ್ದಗಳು ಬರಬರುತ್ತ ಸ್ವರಾಂತ್ಯಗೊಳ್ಳುವುದಕ್ಕೆ ಅನುಗುಣವಾಗಿ ಮೂಡಲ್ ಎಂಬುದು ಮೂಡಲು ಎಂದಾಯಿತು. ಈ ರೂಪಗಳು ಹನ್ನೊಂದು ಹನ್ನೆರಡನೇ ಶತಮಾನದ ಕನ್ನಡ ಚಂಪೂ ಕಾವ್ಯಗಳಲ್ಲಿಯೇ ದೊರೆಯುತ್ತವೆ. ಈ ರೂಪಗಳಿಗೆ 'ಅ' ಎಂಬ ಷಷ್ಠೀವಿಭಕ್ತಿ ಪ್ರತ್ಯಯ ಸೇರಿದರೆ ಮೂಡಣ, ಮೂಡಲ ಎಂಬ ರೂಪಗಳಾಗುತ್ತವೆ; ಎರಡರ ಅರ್ಥವೂ ಪೂರ್ವದಿಕ್ಕಿನ, ಪೂರ್ವದಿಕ್ಕಿಗೆ ಸೇರಿದ ಎಂದಾಗುತ್ತದೆ. ಮೂಡಲಗಿರಿ ಎಂದರೆ ಸೂರ್ಯ ಹುಟ್ಟುವ ದಿಕ್ಕಿನ ಬೆಟ್ಟ ಎಂದಾಗಬಹುದು; ಅಥವಾ ಪೂರ್ವದಿಕ್ಕು ಎಂಬ ಬೆಟ್ಟ ಎಂಬ ರೂಪಕವೂ ಆಗಬಹುದು. ಸೂರ್ಯೋದಯವನ್ನು ರೇಖೆಗಳಲ್ಲಿ ಚಿತ್ರಿಸುವಾಗ ಎರಡು ಬೆಟ್ಟಗಳ ನಡುವೆ ಸೂರ್ಯ ಕಾಣಿಸಿಕೊಳ್ಳುವಂತೆ ಬರೆಯುತ್ತಾರಲ್ಲವೇ! ಮೂಡಲಗಿರಿ ಎಂಬರ್ಥದಲ್ಲಿ ಮೂಡುವೆಟ್ಟ, ಮೂಡುವೆಟ್ಟು ಎಂಬ ಎಂಬ ಶಬ್ದಗಳೂ ಮುಂದೆ ಬಳಕೆಯಾಗಿವೆ.
ಮೂಡಲಗಿರಿಯಪ್ಪ, ಮೂಡಲಪ್ಪ, ಮೂಡಲಯ್ಯ ಎಂಬಿವು ಈಗಲೂ ಕನ್ನಡ ನಾಡಿನಲ್ಲಿ ಸಾಮಾನ್ಯವಾದ ವ್ಯಕ್ತಿಯ ಅಂಕಿತನಾಮ. ಮೂಡಲಗಿರಿ ಎಂಬುದಕ್ಕೆ ಅಪ್ಪ ಎಂಬ ಸಂಬಂಧವಾಚಿ ಸೇರಿದೆ. ಅಪ್ಪ ಎಂದರೆ ತಂದೆ, ಒಡೆಯ ಎಂಬ ಅರ್ಥ. ಹೀಗಾಗಿ ಮೂಡಲಗಿರಿಯಪ್ಪ ಎಂದರೆ ಆ ದಿಕ್ಕಿನ ಒಡೆಯನಾದ ಸೂರ್ಯ ಎಂದಾಗುತ್ತದೆ. ಈ ಬಗೆಯ ರಚನೆ ಕನ್ನಡದಲ್ಲಿ ಸಾಮಾನ್ಯ. ಎಡೆಯೂರು ಪ್ರಸಿದ್ಧ ಕ್ಷೇತ್ರ; ಅದರ ಒಡೆಯನಾದ ದೈವ ಎಡೆಯೂರಪ್ಪ; ಮೈಲಾರ ಎಂಬ ಊರಿನ ಒಡೆಯನಾದ ದೈವ ಮೈಲಾರಪ್ಪ ಹೀಗೆ.

======

**ಮೈದುನ:** ಹಿಂದೆ ಈ ಪದವನ್ನು ಮೆಯ್ದುನ, ಮಯ್ದುನ, ಮಯಿದುನ ಎಂದು ಮುಂತಾಗಿ ಬರೆಯುತ್ತಿದ್ದುದು ರೂಢಿ. ಇದೊಂದು ದ್ರಾವಿಡ ಪದ: ತಮಿಳಿನಲ್ಲಿ ಮೈತುನನ್, ಮಚ್ಚಾನ್. ಮಚ್ಚುನನ್ ಎಂಬ ರೂಪಗಳಲ್ಲಿಯೂ, ಮಯಲಯಾಳಂನಲ್ಲಿ ಮಚ್ಚುನನ್, ಮಚ್ಚಿನನ್, ಎಂದೂ, ತೆಲುಗಿನಲ್ಲಿ ಮೇನ ಎಂದೂ, ತುಳುವಿನಲ್ಲಿ ಮೈತಿನೆ ಅಥವಾ ಮಯದಿನೆ ಎಂದೂ ರೂಪಗಳನ್ನು ತಾಳುತ್ತದೆ. ಇದರ ಅರ್ಥ ತಂಗಿಯ ಗಂಡ, ಸೋದರಮಾವನ (ತನಗಿಂತ ಚಿಕ್ಕವನಾದ) ಮಗ, ಗಂಡನ ಅಥವಾ ಹೆಂಡತಿಯ ತಮ್ಮ ಎಂಬಿವುಗಳು. ತೆಲುಗಿನಲ್ಲಿ 'ಮಱದಿ' ಎಂಬುದು ಈ ಸಂಬಂಧವನ್ನು ಸೂಚಿಸುವ ರೂಢಿಯ ಶಬ್ದ. "ಕಾಶ್ಯಪಿಯೆಂಬೊಳೆನಗೆ ತಂಗೆಯುಮಿಲ್ಲ ಸೋಮಶರ್ಮನೆಂಬೊಂ ಮಯ್ದುನನುಮಿಲ್ಲ" ಎಂಬ ವಾಕ್ಯ 'ವಡ್ಡಾರಾಧನೆ'ಯ 'ಸುಕುಮಾರಸ್ವಾಮಿಯ ಕಥೆ'ಯಲ್ಲಿ ಸಿಕ್ಕುತ್ತದೆ. "ಎನ್ನ ಮೆಯ್ದುನನಪ್ಪ ವಜ್ರಬಾಹುಗಂ ಎನ್ನ ತಂಗೆಯಪ್ಪ ವಸುಂಧರೆಗಂ" ಎಂಬುದು ಪಂಪನ ಆದಿಪುರಾಣದ ಮಾತು. ಮಇದು ಎಂಬ ರೂಪವನ್ನೂ ಕೆಲವು ಶಾಸನಗಳಲ್ಲಿ ಕಾಣಬಹುದು. "ಸಹೋದರಿ ಗಿರಿಜೆ ಮೈದುನನು ಶಂಕರನು ಸುರರೆಲ್ಲ ಕಿಂಕರರು" ಎಂಬ ಮಾತು ಕನಕದಾಸನ 'ಹರಿಭಕ್ತಿಸಾರ'ದಲ್ಲಿದೆ. ಸಾಮಾನ್ಯರ ನುಡಿಯಲ್ಲಿ ಇದು ಮೈದ ಎಂಬ ರೂಪವನ್ನೂ ಪಡೆಯುತ್ತದೆ. 'ಬಾವಮೈದುನ', ಎಂಬುದು ಸಾಮಾನ್ಯರ ಮಾತಿನಲ್ಲಿ 'ಬಾಮೈದ' ಎಂದಾಗುತ್ತದೆ.

ಮೆಯ್ದುನಿಸು ಎಂಬ ಅಪರೂಪದ ರೂಪವು ಮೈದುನನ ಜೊತೆಯ ಸಲಿಗೆಯನ್ನು ಸೂಚಿಸುತ್ತದೆ. ನೇಮಿಚಂದ್ರನೆಂಬ ಕ್ರಿಶ. ೧೧೭೦ ರ ಕವಿಯ 'ಅರ್ಧನೇಮಿಪುರಾಣದಲ್ಲಿ ಈ ವಾಕ್ಯ ದೊ–ರೆಯುತ್ತದೆ: "ವಧು ಮೆಯ್ದುನಿಸುತುಮಡ್ಡಂ ಬಂದಳ್" ಎಂಬುದು ಅಲ್ಲಿಯ ಮಾತು. ಇದೇ ಅರ್ಥದಲ್ಲಿ ಕುಮಾರವ್ಯಾಸನು 'ಮೈದುನತನ' ಎಂಬ ಮಾತನ್ನು ಬಳಸುತ್ತಾನೆ. ಕರ್ಣನ ದುರ್ಯೋಧನನಿಷ್ಠೆಯ ಮನಸ್ಸನ್ನು ಒಡೆಯಲು ಬಂದ ಕೃಷ್ಣನು ಮೊದಲು "ಇನತನೂಜನ ಕೂಡೆ ಮೈದುನತನದ ಸರಸವನೆಸಗು"ತ್ತಾನಂತೆ.

=====

ರಾಜ: ಇದರ ಮೂಲ ಸಂಸ್ಕೃತ ರೂಪ ರಾಜನ್ ಎಂಬುದು. "ಅವನೀಪತಿ ರಾಜಂ ಪಾರ್ಥಿವಂ ನೃಪಂ ಕ್ಷತ್ರಿಯಂ ಜನಾಧಿಪಂ ಅರಸಂ" ಎಂದು ಮುಂತಾಗಿ ನಾಗವರ್ಮನ 'ಅಭಿಧಾನ ವಸ್ತುಕೋಶ'ವು ಸಮಾನಾರ್ಥಕಗಳನ್ನು ನೀಡುತ್ತದೆ. ರಾಜರಲ್ಲಿ ವಾರ್ಷಿಕ ವರಮಾನದ ಆಧಾರದಿಂದ ಸಾಮಂತ, ಮಾಂಡಲಿಕ, ರಾಜನ್, ಮಹಾರಾಜ, ಸ್ವರಾಟ್, ಸಮ್ರಾಟ್, ವಿರಾಟ್, ಸಾರ್ವಭೌಮ ಎಂಬ ಬಗೆಗಳನ್ನು 'ಶುಕ್ರನೀತಿಸಾರ'ವು ಹೇಳುತ್ತದೆ. ಆದರೆ ಈ ವರ್ಗೀಕರಣವು ರೂಢಿಯಲ್ಲೇನೂ ಇರಲಿಲ್ಲ. ಪಂಪನ 'ಆದಿಪುರಾಣ'ದಲ್ಲಿ ಬಾಹುಬಲಿಯು ರಾಜಾಧಿರಾಜ ಎಂಬುದನ್ನು 'ಅಡಕಿಲ್ವೆಸರ' (ಒಂದರ ಮೇಲೊಂದು ಪೇರಿಸಿದ ಹೆಸರು) ಎಂದು ಹಾಸ್ಯಮಾಡುತ್ತಾನೆ.

ರಾಜನನ್ನು ಸೃಷ್ಟಿಸುವಾಗ ದೇವರು ಅವನಲ್ಲಿ ಅಷ್ಟದಿಕ್ಪಾಲಕರ ಅಂಶಗಳನ್ನು ಸೇರಿಸಿರುವನೆಂದು ಮನು ಹೇಳುತ್ತಾನೆ. ರಾಜನಿಗಿರಬೇಕಾದ ಯೋಗ್ಯತೆಗಳೇ 'ರಾಜಲಕ್ಷಣ'; ನಾಲ್ಕು ಉಪಾಯಗಳು, ಐದು ಬಗೆಯ ತಂತ್ರಗಳು, ಮೂರು ಬಗೆಯ ಶಕ್ತಿಗಳು, ಚತುರಂಗಬಲ, ಸಪ್ತಾಂಗಗಳು – ಇವುಗಳ್ನು 'ವಿವೇಕ ಚಿಂತಾಮಣಿ'ಯು ರಾಜಲಕ್ಷಣಗಳೆಂದು ಕರೆಯುತ್ತದೆ. 'ರಾಜಸಭೆ' ಎಂದರೆ ರಾಜನು ಮಂತ್ರಿ ಮತ್ತಿತರ ಗಣ್ಯರ ಜೊತೆ ಸಮಲೋಚನೆ ಮಾಡುತ್ತಿದ್ದ ಸಭೆ; ಇದನ್ನು ಕನ್ನಡದಲ್ಲಿ ಒಡ್ಡೋಲಗ ಎನ್ನುತ್ತಿದ್ದರು. ರಾಜನ ಏಳು ಮೂಲಭೂತ ಆಧಾರಗಳನ್ನು ಬಂಧುವರ್ಮನ 'ಹರಿವಂಶಾಭ್ಯುದಯ'ವು ರಾಜ್ಯಪ್ರಕೃತಿಗಳೆಂದು ಕರೆಯುತ್ತದೆ. ಅವುಗಳೆಂದರೆ, ಸ್ವಾಮಿ ಅಮಾತ್ಯ ಜನಪದ ದುರ್ಗ ದಂಡ ಕೋಶ ಮತ್ತು ಮಿತ್ರ. ಪಂಪನ 'ಆದಿಪುರಾಣದ'ಲ್ಲಿ ಒಳ್ಳೆಯ ರಾಜನಿರುವ ನಾಡನ್ನು 'ರಾಜನ್ವತಿ' ಎಂದೂ, ಹೆಸರಿಗೆ ಮಾತ್ರ ರಾಜನಿರುವ ನಾಡನ್ನು 'ರಾಜವತಿ' ಎಂದೂ ಕರೆದಿದೆ: "ರಾಜವತಿಯಕ್ಕುಮಲ್ಲದೆ ರಾಜನ್ವತಿಯಾಗದಲ್ತೆ ಧರೆ". ರಾಜನ ಅರಮನೆಯಿದ್ದು ಆಡಳಿತಕೇಂದ್ರವಾಗಿರುವ ಪಟ್ಟಣವೇ 'ರಾಜಧಾನಿ'.

ಮುಖ್ಯವೆಂದು ಸೂಚಿಸುವೆಡೆಯಲ್ಲೆಲ್ಲ ರಾಜ ಎಂಬ ಪೂರ್ವಪದವನ್ನು ಸೇರಿಸುವುದು ರೂಢಿ: ರಾಜಬೀದಿ, ರಾಜಮರ್ಯಾದೆ, ರಾಜವೈಭವ ಇತ್ಯಾದಿ. ರಾಜ ಎಂಬುದಕ್ಕೆ ಚಂದ್ರ ಎಂಬ ಅರ್ಥವೂ ಇದೆ. ರಾಜಶೇಖರ (ಚಂದ್ರನನ್ನು ತಲೆಯಲ್ಲಿ ಧರಿಸಿರುವವನು, ಶಿವ) ಎಂಬುದು ಇದಕ್ಕೆ ಉದಾಹರಣೆ.

=====




shutterstock.com · 265003949

# ಪತ್ರಿಕಾ ನೆನಪು




## ಭಕ್ತಿಗೀತೆ ಗಾಯನ ಸ್ಪರ್ಧೆ

ಬೆಂಗಳೂರು: ಬಿ.ಎಂ.ಶ್ರೀ ಪ್ರತಿಷ್ಠಾನವು ಎನ್.ಆರ್.ಕಾಲೊನಿಯ ಎಂ.ವಿ.ಸೀ ಸಭಾಂಗಣದಲ್ಲಿ ಜೂನ್ 26ರಂದು ಬೆಳಿಗ್ಗೆ 10.30ಕ್ಕೆ ಭಕ್ತಿಗೀತೆ ಗಾಯನ ಸ್ಪರ್ಧೆ ಏರ್ಪಡಿಸಿದೆ.

13ರಿಂದ 18 ವರ್ಷದೊಳಗಿನವರು ಸ್ಪರ್ಧೆಯಲ್ಲಿ ಭಾಗವಹಿಸಬಹುದು. ವಿಜೇತರಿಗೆ ಬಹುಮಾನ ಹಾಗೂ ಪ್ರಶಸ್ತಿಪತ್ರಗಳನ್ನು ನೀಡಲಾಗುವುದು. ಆಸಕ್ತರು ಜೂನ್ 20ರೊಳಗೆ ತಮ್ಮ ಹೆಸರು ನೋಂದಣಿ ಮಾಡಿಕೊಳ್ಳಬೇಕ ಎಂದು ಪ್ರಕಟಣೆ ತಿಳಿಸಿದೆ.

ಸಂಪರ್ಕ: 9972812127

## ನಮ್ಮೂರಲ್ಲಿಂದು

ಸಾಹಿತ್ಯ ಸಾಂಸ್ಕೃತಿಕ

» ಉಪನ್ಯಾಸ: ಬಿಎಂಶ್ರೀ ಪ್ರತಿಷ್ಠಾನ ಆಯೋಜನೆ. ಎಸ್. ಕೆ. ಪ್ರೇಮ, ಪ್ರೊ.ಜಿ.ಎಸ್. ಸಿದ್ದಲಿಂಗಯ್ಯ ದತ್ತಿ ಉಪನ್ಯಾಸ. ವಿಷಯ: ಅಕ್ಕಮಹಾದೇವಿ ವಚನಗಳ ವಿವೇಚನೆ. ಉಪನ್ಯಾಸ: ಡಾ.ಎಸ್.ಎಚ್. ಭುವನೇಶ್ವರ. ಅಧ್ಯಕ್ಷತೆ: ಸಾಹಿತಿ ಬೈರಮಂಗಲ ರಾಮೇಗೌಡ. ಸ್ಥಳ: ಎಂವಿಸೀ ಸಭಾಂಗಣ, ಬಿಎಂಶ್ರೀ ಕಲಾಭವನ, ನರಸಿಂರಾಜ ಕಾಲನಿ. ಸಂಜೆ 5ಕ್ಕೆ.

೫ನೇ ಪುಟದಿಂದ

ಎಂವಿಸೀ ಅವರ ಕಾದಂಬರಿಗಳ ಕತೆಗಳು ವಿಭಿನ್ನ ಪರಿಸರಗಳಲ್ಲಿ ನಡೆಯುತ್ತವೆ; ಅವುಗಳಿಗನುಗುಣವಾಗಿ ಲೇಖಕರು ಅಲ್ಲಿನ ವಾತಾವರಣವನ್ನು ಸೃಷ್ಟಿಸುತ್ತಾರೆ. ಅವರ ಬಹುತೇಕ ಪಾತ್ರಗಳು ಮಧ್ಯಮವರ್ಗದ ಬ್ರಾಹ್ಮಣ ಕುಟುಂಬಗಳ ಗಂಡು ಹೆಣ್ಣುಗಳಾದರೂ ಅವರಲ್ಲಿಯೂ ವಿವಿಧ ಮನೋಭಾವದವರಿದ್ದಾರೆ. ಕತೆಯ ನಡುನಡುವೆಯೇ ಸಾಮಾಜಿಕ ಸನ್ನಿವೇಶಗಳು, ಬದುಕಿನ ಏರಿಳಿತಗಳು, ಜನರ ಕಷ್ಟ ನೋವುಗಳು ಚಿತ್ರಿತವಾಗುತ್ತವೆ. ಎಂವಿಸೀ ಅವರ ಮಿಕ್ಕೆಲ್ಲ ಕಾದಂಬರಿಗಳು ನೇರ ಕತೆ, ಸರಳ ನಿರೂಪಣೆಗಳಿಂದ ಒಂದು ಗುಂಪಿಗೆ ಸೇರಿದರೆ, 'ಮಾದನ ಮಗಳು'ವಿನಲ್ಲಿ ಕಥಾ ಹಂದರ ಹೆಚ್ಚಿನ ವಿಸ್ತಾರವನ್ನು ಹೊಂದಿ, ರಾಜಕೀಯ–ಸಾಮಾಜಿಕ ಪಲ್ಲಟಗಳನ್ನು ತೆರೆದ ಕಣ್ಣಿನಿಂದ ಚಿತ್ರಿಸುತ್ತ ಸಂಕೀರ್ಣ ಸ್ವರೂಪವನ್ನು ಪಡೆದು ವಿಭಿನ್ನ ವರ್ಗಕ್ಕೆ ಸೇರುತ್ತದೆ. ವಸ್ತು ಯಾವುದೇ ಆಗಿರಲಿ, ಕತೆಯನ್ನು ನೇರವಾಗಿಯೂ ಸರಳವಾಗಿಯೂ ನಿರೂಪಿಸುವ ಕೌಶಲ ಲೇಖಕರಿಗಿದೆ. ತಂತ್ರಗಾರಿಕೆಯಲ್ಲಿ ಅವರಿಗೆ ನಬಂಬಿಕೆಯಿದ್ದಂತಿಲ್ಲ; ಹಾಗಾಗಿ ಎಲ್ಲೆಡೆಯೂ ಪ್ರಥಮಪುರುಷ ನಿರೂಪಣೆಯೇ ಮುಖ್ಯವಾಗಿ ಕಾಣಿಸಿಕೊಳ್ಳುತ್ತದೆ. ಈ ಕ್ಷೇತ್ರಕ್ಕೆ ಎಂವಿಸೀ ಅವರ ಕೊಡುಗೆಯನ್ನು 'ಅಪಾರ'ವೆಂದು ಬಣ್ಣಿಸಲು ಅವಕಾಶವಿಲ್ಲದಿದ್ದರೂ, ತನ್ನ ಕಾಲದ ಸಾಮಾನ್ಯ ಓದುಗರಿಗೆ ಸದಭಿರುಚಿಯ ಬರವಣಿಗೆಯನ್ನು ನೀಡಿದವರು ಅವರು ಎಂದು ಮಾತ್ರ ಧಾರಾಳವಾಗಿ ಹೇಳಬಹುದು.

– ಮುಂದುವರೆಯುವುದು

.

**ಬಿ.ಎಂ.ಶ್ರೀ. ಪ್ರತಿಷ್ಠಾನದ ಪ್ರಕಟಣೆಗಳು ಹಾಗೂ ಮಾರಾಟಕ್ಕೆ ಲಭ್ಯವಿರುವ ಪುಸ್ತಕಗಳ ಪಟ್ಟಿ**

೧. ಶ್ರೀ ಕೌಸ್ತುಭ
೨ ಅರ್ಚನಾ
೩. ಯುದ್ಧಕಾಂಡ
೪ ಲೋಚನ ದೀಪ್ತಿ
೫. ಬಿ.ಎಂ.ಶ್ರೀ. ಅವರ ಆಯ್ದ ಕವನಗಳು
೬. ಬಿ.ಎಂ.ಶ್ರೀಕಂಠಯ್ಯ ಜೀವನ ಸಾಧನೆ
೭. ಇಂಗ್ಲಿಷ್ ಗೀತಗಳು
೮. ಪ್ರೊ. ವಿ.ಎಂ. ಇನಾಂದಾರ್ : ಬದುಕು ಬರಹ
೯.. ಗ್ರಂಥ ಸಂಪಾದನೆ ಪರಿಭಾಷಾ ಕೋಶ
೧೦. ಹಸ್ತಪ್ರತಿ ಅಧ್ಯಯನ ಶಾಸ್ತ್ರ
೧೧. ಹೊಸಗನ್ನಡ ವ್ಯಾಕರಣ
೧೨. ಕುಂತಿಯ ಅಂತರಾಳ
೧೩. ಕರ್ನಾಟಕ ಶಬ್ದಾನುಶಾಸನಂ
೧೪. ಕಾವ್ಯದ ಒಂದು ಚುಂಗನ್ನು ಹಿಡಿದು
೧೫. ಕಾವ್ಯ ಶಾಸ್ತ್ರ ವಿನೋದ
೧೬. ಕನ್ನಡ ಶರಣ ಎಂ.ಆರ್.ಶ್ರೀ.
೧೭ ಕನ್ನಡ ಸಾಹಿತ್ಯದಲ್ಲಿ ವಿಶಿಷ್ಟಾದ್ವೈತ
೧೮. ಕವಿಜಿಹ್ವಾ ಬಂಧನಂ
೧೯. ಕವಿಗಳು ಕಂಡ ಬಿ.ಎಂ.ಶ್ರೀ.
೨೦. ಲೋಚನ ಲೇಖನ ಸೂಚಿ
೨೧. ಪ್ರೊ. ಡಿ.ಲಿಂಗಯ್ಯ – ಜೀವನ ಮತ್ತು ಸಾಹಿತ್ಯ ಸಾಧನೆ
೨೨. ಎಂ.ವಿ.ಸೀತಾರಾಮಯ್ಯ–ಜೀವನ ಮತ್ತು ಸಾಹಿತ್ಯ ಸಾಧನೆ

## ಕಿರುಪರಿಚಯ

## ಡಾ. ಟಿ.ಕೆ. ಕೆಂಪೇಗೌಡ (ಜನನ -೨೦-೩-೧೯೭೬)

ಅವರು ಮೈಸೂರು ವಿಶ್ವವಿದ್ಯಾನಿಲಯದಿಂದ ಎಂ.ಎ., ಪಿಎಚ್.ಡಿ. ಪದವಿಗಳನ್ನು ಪಡೆದು ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ಕನ್ನಡ ಸಹ ಪ್ರಾಧ್ಯಾಪಕರಾಗಿದ್ದಾರೆ. ೩೦ಕ್ಕೂ ಹೆಚ್ಚಿನ ಕೃತಿಗಳನ್ನು ಹೊರತಂದ ಕೀರ್ತಿ ಇವರಿಗೆ ಸಲ್ಲುತ್ತದೆ.

ರಾಜ್ಯ, ರಾಷ್ಟ್ರ, ಅಂತಾರಾಷ್ಟ್ರೀಯ ಜಿಲ್ಲಾಮಟ್ಟದ ವಿಚಾರ ಸಂಕಿರಣಗಳಲ್ಲಿ ಪ್ರಬಂಧ ಮಂಡನೆ ಮಾಡಿ ವಿದ್ವಜ್ಜನರ ಮೆಚ್ಚುಗೆಯನ್ನು ಗಳಿಸಿದ್ದಾರೆ. ಇವರ ಮಾರ್ಗದರ್ಶನದಲ್ಲಿ ೮ ಮಂದಿ ಪಿಎಚ್.ಡಿ. ಪದವಿಯನ್ನು, ೬ ಮಂದಿ ಎ.ಫಿಲ್. ಪದವಿಯನ್ನು ಪಡೆದಿರುತ್ತಾರೆ. ಪ್ರಸ್ತುತ ೯ ಮಂದಿ ಪಿಎಚ್.ಡಿ. ಸಂಶೋಧನೆ ಕೈಗೊಂಡಿದ್ದಾರೆ. ಶ್ರೀಯುತರು ಸಲ್ಲಿಸಿರುವ ಸೇವೆಗಾಗಿ ನಾಡಿನ ಹತ್ತು ಹಲವು ಸಂಸ್ಥೆಗಳು ಗೌರವಿಸಿ ಪ್ರಶಸ್ತಿ ನೀಡಿ ಸನ್ಮಾನಿಸಿವೆ.

### ರಾಸ ಸಾಹಿತ್ಯ ಮತ್ತು ಸಮೇತನಹಳ್ಳಿ ರಾಮರಾವ್ ದತ್ತಿ

೧೦-೧೦-೧೯೫೫ರಲ್ಲಿ ಸಮೇತನಹಳ್ಳಿ ರಾಮರಾಯರೇ ಈ ದತ್ತಿಯನ್ನು ಸ್ಥಾಪನೆ ಮಾಡಿರುತ್ತಾರೆ.

### ಪ್ರೊ. ಡಿ.ಲಿಂಗಯ್ಯ ದತ್ತಿ

ಪ್ರೊ.ಡಿ. ಲಿಂಗಯ್ಯ ಅವರು ೧೯-೧೦-೧೯೯೭ ರಿಂದ ೨೭-೦೯-೨೦೦೩ರ ವರೆಗೆ ಬಿ.ಎಂ.ಶ್ರೀ.ಪ್ರತಿಷ್ಠಾನದ ವ್ಯವಸ್ಥಾಪಕ ಕಾರ್ಯದರ್ಶಿಯಾಗಿ, ೨೮-೦೯-೨೦೦೩ ರಿಂದ ೨೮-೦೨-೨೦೦೬ ನಂತರ ಗೌ.ಕೋಶಾಧಿಕಾರಿಯಾಗಿ, ೨೩-೧೦-೨೦೧೦ ರಿಂದ ೧೨-೦೯-೨೦೧೨ರ ವರೆಗೆ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದಾರೆ. ಇವರ ಹೆಸರಿನಲ್ಲಿ ಸ್ನೇಹಿತರು ಸೇರಿ ಈ ದತ್ತಿಯನ್ನು ೨೦೧೩ರಲ್ಲಿ ಸ್ಥಾಪಿಸಿರುತ್ತಾರೆ.

### ಪ್ರೊ. ಟಿ.ಎಸ್. ವೆಂಕಣ್ಣಯ್ಯ ದತ್ತಿ

೧೯೮೬ರಲ್ಲಿ ದತ್ತಿ ಸ್ಥಾಪನೆಯಾಗಿರುತ್ತದೆ. ಈ ದತ್ತಿಗೆ ಹಲವಾರು ಅಭಿಮಾನಿಗಳು ದೇಣಿಗೆ ನೀಡಿರುತ್ತಾರೆ.

### ಪ್ರೊ. ತೀ.ನಂ.ಶ್ರೀ ದತ್ತಿ

ಈ ದತ್ತಿಯನ್ನು ೨೦೦೨ರಲ್ಲಿ ಹಲವಾರು ಸ್ನೇಹಿತರು ಮತ್ತು ತೀ.ನಂ.ಶ್ರೀ. ಯವರ ಪುತ್ರ ಪ್ರೊ. ಟಿ.ಎಸ್. ನಾಗಭೂಷಣ್ ಅವರು ಸ್ಥಾಪಿಸಿದ್ದಾರೆ.

### ಶ್ರೀಮತಿ ಶಾರದಮ್ಮ ಹನುಮಯ್ಯ ದತ್ತಿ

ತಮ್ಮ ತಂದೆ ತಾಯಿಯವರ ಹೆಸರಿನಲ್ಲಿ ಡಾ. ಎಚ್.ಜಯಮ್ಮ ಕರಿಯಣ್ಣ ಅವರು ಈ ದತ್ತಿಯನ್ನು ೨೦೦೮ ರಲ್ಲಿ ಸ್ಥಾಪಿಸಿದ್ದಾರೆ.

**HONGANASU KANNADA MONTHLY**
**RNI No. KAR/KAN/2015/64049**
**REGISTERED**
**Post office Registration No.RNP/KA/BGS/2229/2021-2023**
**dt. 28-12-2020**
**Office of Posting: Bangalore PSO, Bangalore 560026**
**Price : Annual Subscription Rs. 20/-**
**Date of publishing and Posting : 30-06-2022**

## ಜುಲೈ ೨೦೨೨

### ಹಸ್ತಪ್ರತಿ ವಿಭಾಗ / ಗ್ರಂಥಾಲಯ ವಿಭಾಗಗಳ ವರದಿ

ಹಸ್ತಪ್ರತಿ ಸಂಗ್ರಹಾಲಯಕ್ಕೆ ಕೆಲವು(೨೦) ತಾಡೆ ಓಲೆ ಗ್ರಂಥಗಳು ಸಂರಕ್ಷಣೆಗಾಗಿ ಸ್ವೀಕರಿಸಲಾಗಿದೆ. ಅವುಗಳ ಸಂರಕ್ಷಣಾ ಕಾರ್ಯ ವಿವಿಧ ಹಂತಗಳಲ್ಲಿ ನಡೆ-ಯುತ್ತಿದೆ. ಈ ಹಿಂದೆ ಮಾರ್ಚ್ ೨೦೨೨ರಲ್ಲಿ ಪ್ರತಿಷ್ಠಾನದ ಸಂಗ್ರಹಾಲಯಕ್ಕೆ ಶ್ರೀ ಅರೆಯರ್ ರಾಮಶರ್ಮಾ ಅವರು ನೀಡಿದ್ದ ಶಬ್ದಮಣಿ ದರ್ಪಣ ಗ್ರಂಥದ ಸಂರಕ್ಷಣಾ ಕಾರ್ಯ ಪೂರ್ಣಗೊಂಡಿದ್ದು, ಸೂಚಿಯನ್ನು ಸಿದ್ಧಪಡಿಸಿದೆ.

ಏಪ್ರಿಲ್, ಮೇ ೨೦೨೨ರಲ್ಲಿ ಗ್ರಂಥಾಲಯವು ಪುಸ್ತಕದಾನಿಗಳಿಂದ ೧೧೯ ಪುಸ್ತಕಗಳನ್ನು ಸ್ವೀಕರಿಸಿದೆ. ಅವುಗಳ ದಾಖಲೀಕರಣ ಮತ್ತು ವರ್ಗೀಕರಣ ಪೂರ್ಣಗೊಂಡಿದೆ.

## ಬಿ.ಎಂ.ಶ್ರೀ. ಪ್ರತಿಷ್ಠಾನದ ಬದಲಾದ ದೂರವಾಣಿ ಸಂಖ್ಯೆ

ಬಿ.ಎಂ.ಶ್ರೀ.ಪ್ರತಿಷ್ಠಾನದ ಸ್ಥಿರ ದೂರವಾಣಿ ಸಂಖ್ಯೆ ರದ್ದುಗೊಂಡಿದ್ದು ಸಂಚಾರಿ ದೂರವಾಣಿ ಸಂಖ್ಯೆ - ೯೭೨೮೧೨೧೨೭ ಈ ಮೂಲಕವೇ ಸಂಪರ್ಕಿಸಬೇಕಾಗಿ ಕೋರುತ್ತೇವೆ.

**Printed and published by** : B.R.Ravindranath on behalf of the BMSRI SMARAKA PRATISHTANA, B.M.Sri Pratishtana Road, (3rd Main Road) NR Colony, Bangalore - 560019 and printed at Annapoorneshwari Printers, No. 11, 10 'C' Main, 6th Block, Rajajinagar, Bangalore 10 . and published at BMSRI PRATISHTANA, B.M.Sri Pratishtana Road, 3rd Main Road, NR Colony, Bangalore - 560019 Editor : **B.R.Ravindranath**

**ಅಚ್ಚಾದ ಪುಸ್ತಕ**

ಶ್ರೀಮತಿ/ಶ್ರೀ.......................................................................................

.......................................................................................

.......................................................................................

ವಿಳಾಸ
**ಬಿ.ಎಂ.ಶ್ರೀ. ಪ್ರತಿಷ್ಠಾನ**
ಬಿ.ಎಂ.ಶ್ರೀ. ಪ್ರತಿಷ್ಠಾನದ ರಸ್ತೆ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು - ೧೯
ದೂರವಾಣಿ : ೯೭೨೮೧೨೧೨೭